| ಕ್ರ. ಸಂ. | ವಲಯದ ಹೆಸರು | ಯೋಜನೆ ಹೆಸರು/ಮಾದರಿ | ಕಾಮಗಾರಿ ಪ್ರದೇಶದ ಹೆಸರು | ಪ್ರದೇಶ ಹೆ.ನಲ್ಲಿ | ಅಂದಾಜು ಮೊತ್ತ | ಇ.ಎಂ.ಡಿ. ಮೊತ್ತ |
|---|---|---|---|---|---|---|
| 276 | ಅಜ್ಜಂಪುರ | ಕೆ.ಎಫ್.ಡಿ.ಎಫ್. – 1ನೇ ವರ್ಷದ ನೆಡುತೋಪು ನಿರ್ವಹಣೆ | ತಿಪ್ಪಗೊಂಡನಳ್ಳಿ | 25 | 130000 | 3250 |
| 277 | ಅಜ್ಜಂಪುರ | ಕೆ.ಎಫ್.ಡಿ.ಎಫ್. – 2ನೇ ವರ್ಷದ ನೆಡುತೋಪು ನಿರ್ವಹಣೆ | ಗಂಗೇನಹಳ್ಳಿ | 30 | 145500 | 3638 |

**ನಿಬಂಧನೆಗಳು:–**

1. ಟೆಂಡರ್ ಪ್ರಕಟಣೆಯಲ್ಲಿ ತೋರಿಸಿರುವ ಕಾಮಗಾರಿಗಳ ಗುರಿ ಮತ್ತು ಪ್ರದೇಶಗಳು ವ್ಯತ್ಯಾಸವಾದಲ್ಲಿ ಪರಿಷ್ಕೃತ ಗುರಿ ಮತ್ತು ಪ್ರದೇಶವನ್ನು ಕೆಲಸದ ಆದೇಶದ ಮೊದಲು ನೀಡಲಾಗುವುದು. ನೆಡುತೋಪು ರಚನೆ ಮತ್ತು ಮೊದಲ ವರ್ಷದ ನೆಡುತೋಪು ನಿರ್ವಹಣೆ ಕಾಮಗಾರಿಗಳಿಗೆ ಅಗತ್ಯವಾದ ಸಸಿಗಳ ಪೋಷಣೆ/ಸಸಿಗಳ ಬೆಳೆಸುವ ಕಾಮಗಾರಿ ಒಳಗೊಂಡಿರುತ್ತದೆ.
2. ಟೆಂಡರ್ ಫಾರಂಗಳನ್ನು ನಿಗಧಿತ ಶುಲ್ಕ ರೂ.200 ಮತ್ತು ಅನ್ವಯಿಸುವ ತೆರಿಗೆ ಪಾವತಿ ಮಾಡಿ ದಿನಾಂಕ: 03.06.2009 ರಂದು ಬೆಳಿಗ್ಗೆ 10.00 ಗಂಟೆಯಿಂದ ಮಧ್ಯಾಹ್ನ 1.00 ಗಂಟೆಯ ಒಳಗೆ ಪಡೆಯಬಹುದಾಗಿದೆ. ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2009–10ನೇ ಸಾಲಿಗೆ ತಮ್ಮ ಹೆಸರನ್ನು ಅರಣ್ಯ ಗುತ್ತಿಗೆದಾರರಾಗಿ ನೊಂದಾಯಿಸಿಕೊಂಡಿರಬೇಕು. ತಪ್ಪಿದಲ್ಲಿ ಅಂತಹವರ ಟೆಂಡರ್‌ನ್ನು ಪರಿಗಣಿಸಲಾಗುವುದಿಲ್ಲ. ಟೆಂಡರ್ ಫಾರಂಗಳನ್ನು ವರ್ಗಾಯಿಸುವಂತಿಲ್ಲ.
3. ಪ್ರತಿ ಕಾಮಗಾರಿಗೂ ಪ್ರತ್ಯೇಕವಾದ ಟೆಂಡರ್ ಫಾರಂ ಭರ್ತಿ ಮಾಡಿ ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ಮೊಹರು ಮಾಡಿದ ಲಕೋಟೆಯಲ್ಲಿ ಸಲ್ಲಿಸುವುದು. ಮತ್ತು ಟೆಂಡರ್‌ದಾರರು ನೀಡುವ ದರವನ್ನು ಅನುಸೂಚಿಯ ಮೊಬಲಗಿನ ಮೇಲೆ ಶೇಕಡಾ ಇಂತಿಷ್ಟು ಹೆಚ್ಚು ಅಥವಾ ಕಡಿಮೆ ಎಂಬುದನ್ನು ಅಂಕಿ ಹಾಗೂ ಅಕ್ಷರಗಳಲ್ಲಿ ಸ್ಪಷ್ಟವಾಗಿ ನಮೂದಿಸತಕ್ಕದ್ದು. ತಿದ್ದುಪಡಿಗಳನ್ನು ಪೂರ್ಣಸಹಿಯೊಂದಿಗೆ ದೃಢೀಕರಿಸಬೇಕು.
4. ಭರ್ತಿ ಮಾಡಿದ ಟೆಂಡರ್ ಫಾರಂನ್ನು ದಿನಾಂಕ: 03–06–2009 ರಂದು ಅಪರಾಹ್ನ 4.30 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಯಾವುದೇ ಕಾರಣದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನ: ದಿನಾಂಕ: 05–06–2009 ರ ಅಪರಾಹ್ನ 4–30 ಗಂಟೆಯವರೆಗೆ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು. ಹಾಗೂ ಅದೇ ದಿನ 5–00 ಗಂಟೆಗೆ ಟೆಂಡರ್ ತೆರೆಯಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.
5. ಸದರಿ ಕಾಮಗಾರಿಗಳು, ಋತುಮಾನಕ್ಕೆ ಅನುಗುಣವಾಗಿ ನಿರ್ವಹಿಸಬೇಕಾದ ಕಾಲಬದ್ಧ ಕೆಲಸಗಳಾಗಿದ್ದು, ಒಂದು ಪಕ್ಷ ಯಾವುದಾದರೂ ಕಾಮಗಾರಿಯನ್ನು ಟೆಂಡರ್‌ಗೆ ಮುಂಚೆ ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈ ಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳನ್ನು ಈ ಪ್ರಕಟಣೆಯ ಟೆಂಡರ್‌ನಿಂದ ಹೊರತುಪಡಿಸಿ ಉಳಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್‌ದಾರರಿಗೆ ಕಾಮಗಾರಿ ಕೈಗೊಳ್ಳಲು ಆದೇಶ ನೀಡಲಾಗುವುದು.
6. ಪ್ರತಿ ಟೆಂಡರ್‌ದಾರರು ಈ ಕಾಮಗಾರಿಗಳನ್ನು ಕೈಗೊಳ್ಳಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.
7. ಈ ಮೇಲಿನ ಕೆಲಸಕ್ಕೆ ಟೆಂಡರ್ ಸಲ್ಲಿಸಲು ಇಚ್ಚಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗದಿಪಡಿಸಿರುವ ಇಎಂಡಿ ಹಾಗೂ ಭದ್ರತಾ ಠೇವಣಿ ಕಾಮಗಾರಿ ಮೊತ್ತಕ್ಕೆ ಶೇ.5 ರಷ್ಟು ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿ.ಡಿ. ರೂಪದಲ್ಲಿ ಟೆಂಡರ್ ಫಾರಂ ಜೊತೆಗೆ ಸಲ್ಲಿಸಬೇಕಾಗುತ್ತದೆ.
8. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅಂತಹವುಗಳನ್ನು ತಿರಸ್ಕರಿಸಲಾಗುವುದು. ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಇವರ ತೀರ್ಮಾನವೇ ಅಂತಿಮವಾಗಿರುತ್ತದೆ.
9. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.
10. ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಇವರು ಕಾಯ್ದಿರಿಸಿಕೊಂಡಿರುತ್ತಾರೆ.

11. ಟೆಂಡರ್‌ನಲ್ಲಿ ಯಶಸ್ವಿಯಾದ ಅರಣ್ಯ ಗುತ್ತಿಗೆದಾರರು ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಇವರಿಂದ ತಿಳುವಳಿಕೆ ನೀಡಿದ 7 ದಿವಸಗಳ ಒಳಗಾಗಿ ನಿರ್ದಿಷ್ಟ ನಮೂನೆಯಲ್ಲಿ ಕರಾರು ನಾಮೆಯನ್ನು ಮಾಡಿಕೊಳ್ಳತಕ್ಕದ್ದು. ಈ ಅವದಿಯನ್ನು ವಿಸ್ತರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ ಇವರು ಹೊಂದಿರುತ್ತಾರೆ.
12. ಈ ಮೇಲಿನ ಕಾಮಗಾರಿಗಳ ಅನುಷ್ಠಾನ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ವಾರ್ಷಿಕ ಕ್ರಿಯಾ ಯೋಜನೆಯ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಳಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
13. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಅಳತೆ ಪುಸ್ತಕದೊಂದಿಗೆ (ಎಂಬಿ/ಎಫ್.ಎನ್.ಬಿ.) ಒಪ್ಪಿಸಬೇಕಾಗಿರುತ್ತದೆ. ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್ಲುಗಳನ್ನು ನಿಯಮದಂತೆ ಚಾಲ್ತಿಯಲ್ಲಿರುವ ಆದಾಯ ತೆರಿಗೆ, ಮಾರಾಟ ತೆರಿಗೆ, ಸೇವಾತೆರಿಗೆ ಸರ್ ಚಾರ್ಜ್, ಮತ್ತು ಭದ್ರತಾ ಠೇವಣಿ ಹಣವನ್ನು ಕಡಿತಗೊಳಿಸಲಾಗುವುದು ಮತ್ತು ಆಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು..
14. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳು/ಅರಣ್ಯ ಉತ್ಪನ್ನಗಳನ್ನು ಹಾಳು ಮಾಡಿದಲ್ಲಿ, ಗಿಡಮರಗಳನ್ನು ಕಡಿದು ನಾಶಪಡಿಸಿದಲ್ಲಿ ಸರ್ಕಾರಕ್ಕೆ ಆದ ನಷ್ಟದ ಬಗ್ಗೆ ಸಂಬಂಧಪಟ್ಟ ಗುತ್ತಿಗೆದಾರರ ಮೇಲೆ ಕಾನೂನು ಪ್ರಕಾರ ಕ್ರಮ ಜಾರಿಗೊಳಿಸಲಾಗುವುದು.
15. ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
16. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡಿಫಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಿರುವುದಿಲ್ಲ.
17. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತಃ ಗುತ್ತಿಗೆದಾರರೇ ವಹಿಸಬೇಕು. ಇಲಾಖೆಯ ಗುತ್ತಿಗೆದಾರರು ಮತ್ತು ಅವರ ನೌಕರರಿಗೆ ಆಗಬಹುದಾದ ಯಾವುದೇ ನಷ್ಟ ಇತ್ಯಾದಿಗಳಿಗೆ ಜವಾಬ್ದಾರರಲ್ಲ.
18. ಟೆಂಡರ್‌ನಲ್ಲಿ ನಮೂದಿಸಿದ ಹಣವು ಅಂದಾಜು ದರವಾಗಿರುತ್ತದೆ. (ಅಪ್ರಾಕ್ಸಿಮೇಟ್) ಹಣವನ್ನು ಪಾವತಿಸುವಾಗ ಮಂಜೂರಾದ ಅಂದಾಜುಪಟ್ಟಿಯಂತೆ ಪಾವತಿಸಲಾಗುವುದು.
19. ಕಾಮಗಾರಿಯನ್ನು ಅರಣ್ಯ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ಅಂದಾಜು ಪಟ್ಟಿಯ ಅನುಗುಣವಾಗಿ ಮಾಡಬೇಕಾಗಿರುತ್ತದೆ. ಕಾಮಗಾರಿಯ ಗುಣಮಟ್ಟವು ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಇವರು ಕಾಲಕಾಲಕ್ಕೆ ನೀಡುವ ಲಿಖಿತ/ಮೌಖಿಕ ಆದೇಶಕ್ಕನುಗುಣವಾಗಿ ಇರತಕ್ಕದ್ದು. ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವಾ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ಧರಾಗಿರಬೇಕಾಗುತ್ತದೆ.
20. ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ನಿರ್ದೇಶನದಂತೆ ಪೂರ್ಣಗೊಳಿಸತಕ್ಕದ್ದು, ಗುತ್ತಿಗೆಯ ಅವಧಿಯನ್ನು ಸಾಮಾನ್ಯವಾಗಿ ವಿಸ್ತರಿಸಲಾಗುವುದಿಲ್ಲ. ನಿಗಧಿತ ಅವಧಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು ಅತಿ ವಿಶೇಷ ಸಂದರ್ಭಗಳು ಬಂದಲ್ಲಿ ವಿಸ್ತರಣಾ ಅವಧಿಯಲ್ಲಿ ಮಾಡಿದ ಕೆಲಸಗಳಿಗೆ ಗುತ್ತಿಗೆ ದರಗಳಲ್ಲಿ ಶೇ.5 ರಂತೆ ಕಡಿತದೊಂದಿಗೆ ಅವಧಿಯನ್ನು ವಿಸ್ತರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಹೊಂದಿರುತ್ತಾರೆ. ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ನೀಡಿದ ನಿರ್ದೇಶನದಂತೆ ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸದಿದ್ದಲ್ಲಿ ಅಂತಹ ಕಾಮಗಾರಿಗಳಿಗೆ ಹಣವನ್ನು ಪಾವತಿಸಲಾಗುವುದಿಲ್ಲ ಮತ್ತು ಇ.ಎಂ.ಡಿ. ಹಾಗೂ ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
21. ಯಶಸ್ವಿ ಟೆಂಡರ್‌ದಾರರು ಕರಾರು ನಾಮೆಯನ್ನು ಸಹಿ ಮಾಡಿದ ನಂತರ ಟೆಂಡರ್‌ರನ್ನು ಹಿಂತೆಗೆದುಕೊಂಡಲ್ಲಿ ನಿಗದಿತ ಸಮಯದಲ್ಲಿ ಕಾಮಗಾರಿ ಪ್ರಾರಂಭಿಸದಿದ್ದಲ್ಲಿ ಕಾಮಗಾರಿಯ ಬಗ್ಗೆ ನಿರಾಸಕ್ತಿ ಹೊಂದಿದಲ್ಲಿ ಅಂತಹ ಟೆಂಡರ್‌ದಾರರ ಭದ್ರತಾ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ಖರ್ಚು ಮತ್ತು ಜವಾಬ್ದಾರಿಯ ಮೇಲೆ ಮರು ಟೆಂಡರ್ ಮಾಡಲಾಗುವುದು. ಟೆಂಡರ್‌ಗೆ

ಕಾಲಾವಕಾಶ ಇಲ್ಲದಿದ್ದಲ್ಲಿ ಇಲಾಖೆಯಿಂದ ಕಾಮಗಾರಿಯನ್ನು ಪೂರ್ಣಗೊಳಿಸಿ ಸರ್ಕಾರಕ್ಕೆ ಹಾನಿಯಾದ ಮೊತ್ತವನ್ನು ಕರ್ನಾಟಕ ಅರಣ್ಯ ಸಂಹಿತೆ 1963 ರ ಕಲಂ 109 ಮತ್ತು 119 ರಂತೆ ಭೂ ಕಂದಾಯ ಬಾಕಿಯಂತೆ ವಸೂಲು ಮಾಡಲಾಗುವುದು.

22. ಯಶಸ್ವಿಯಾದ ಬಿಡ್ಡುದಾರರು ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಭದ್ರತಾ ಠೇವಣಿ ಶೇ.5 ರಷ್ಟು ಮೊತ್ತದ ಬಗ್ಗೆ ವಲಯ ಅರಣ್ಯಾಧಿಕಾರಿಗಳು ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ದೃಢೀಕರಣದ ಪತ್ರ ನೀಡಿದ ನಂತರ ಮೊತ್ತವನ್ನು ಹಿಂದಿರುಗಿಸಲಾಗುವುದು.
23. ಕೆಲಸ ಪೂರ್ಣಗೊಂಡ ದಿನಾಂಕದಿಂದ ಒಂದು ವರ್ಷದೊಳಗಾಗಿ ಕಾಮಗಾರಿಯಲ್ಲಿ ಯಾವುದೇ ದೋಷ ಕಂಡುಬಂದಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ದೋಷ ಪರಿಹರಿಸಬೇಕಾಗುವುದು. ನಂತರ ಭದ್ರತಾ ಠೇವಣಿ ಹಿಂದಿರುಗಿಸಲಾಗುವುದು. ತಪ್ಪಿದಲ್ಲಿ ಭದ್ರತಾ ಠೇವಣಿಯಲ್ಲಿ ಸದರಿ ಖರ್ಚನ್ನು ಭರಿಸಲಾಗುವುದು.
24. ಗುತ್ತಿಗೆದಾರರು ನೇಮಿಸಿಕೊಂಡಿರುವ ಕೂಲಿ ಕಾರ್ಮಿಕರಿಗೆ ಕಾಡು ಪ್ರಾಣಿಗಳಿಂದ ಅಥವಾ ಕಾಡುಗಳ್ಳರಿಂದ ಹಲ್ಲೆ ಅಪಘಾತ ಇನ್ನಿತರೆ ಹಾನಿಗಳು ಸಂಭವಿಸಿದ್ದಲ್ಲಿ ನಷ್ಟ ಪರಿಹಾರವನ್ನು ಗುತ್ತಿಗೆದಾರರೆ ನೀಡಬೇಕಾಗುತ್ತದೆ.
25. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೆ ಯಾವುದೇ ಕೆಲಸವನ್ನು ಟೆಂಡರ್‌ದಾರರು ಪ್ರಾರಂಭಿಸಬಾರದು ಮತ್ತು ಕೆಲಸ ಮುಗಿದ ತಕ್ಷಣ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಲಿಖಿತವಾಗಿ ತಿಳಿಸಬೇಕು.
26. ಟೆಂಡರ್ ಫಾರಂಗಳನ್ನು ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೊಂದಣಿಯನ್ನು ಮಾಡಲಾಗುವುದಿಲ್ಲ.
27. ಕಾಲಕಾಲಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಇವರು ಸರಕಾರ/ಇಲಾಖಾ ಹಿತದೃಷ್ಟಿಯಿಂದ ವಿಧಿಸುವ ಷರತ್ತಿಗೆ ಗುತ್ತಿಗೆದಾರರು ಬದ್ಧರಾಗಿರಬೇಕು.
28. ನೆಡುತೋಪುಗಳ ಕಾವಲುಗಾರಿಕೆಗೆ ಹಾಲಿ ಇರುವ ಅರಣ್ಯ ಇಲಾಖಾ ದಿನಗೂಲಿ ನೌಕರರನ್ನು ನೇಮಿಸಿಕೊಂಡು ಮಜೂರಿ ಪಾವತಿಗೆ ನೇರವಾಗಿ ಕ್ರಮ ಕೈಗೊಂಡು ಮಿಕ್ಕುಳಿದ ಕಾವಲುಗಾರಿಕೆ ಕಾಮಗಾರಿಗೆ ಮಾತ್ರ ಕಾರ್ಯಾದೇಶ ನೀಡಲಾಗುವುದು.
29. ಹೆಚ್ಚುವರಿ ಮಾಹಿತಿ ಹಾಗೂ ಕಾಮಗಾರಿ ಸ್ಥಳದ ಮಾಹಿತಿ ಬೇಕಾದಲ್ಲಿ ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿಗಳ ಕಛೇರಿಯನ್ನು ಸಂಪರ್ಕಿಸಿ ಮಾಹಿತಿ ಪಡೆಯಬಹುದಾಗಿದೆ.

**ಟಿ. ಹೀರಾಲಾಲ್**

ಪಿ.ಆರ್. 336 ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ

**KARNATAKA PUBLIC SERVICE COMMISSION, 'UDYOGA SOUDHA' BANGALORE – 1**

**NOTIFICATION**

**No. R(2) 587/2009-10/PSC, Dated: 29th April 2009**

In pursuance of this Office Notification No. PSC 1 RTB-1/2008 dated:02/06/08, the Provisional Select List of candidates for 03 posts of LAB TECHNICIAN in the Department of DRUGS CONTROL, prepared on the the basis of Rule 8(1) of KCS (Direct Recruitment by Competitive Examination & Selection) (General) Rules 2006 and Amendment Rules 2007 was published vide Notification number R(2) 5991/2008-09/PSC dated:26/03/2009 inviting objections if any from candidates within 15 days from the date of its publication. No objections have been received and the final list is hereby published for the information of the candidates.

Appointing Authority : CONTROLLER

Name of the Department : DRUG CONTROL

| Sl. No. | Name of the Candidate | INT. NO. | D_O_B | RESVN. /QUALN | MARKS |
|---|---|---|---|---|---|
| 1. | PREMA M.K.<br>NEW NO-9 OLD NO-6 4-MAIN 3-CROSS, AYYAPPA SWAMY TEMPLE STREET ULSOOR SHAMANNA GOWDA LAYOUT JOGUPALYA B'LORE-560008 | 6 | 15.05.82 | GM/2A/W<br>B. PHARMA | 85.28 |

| Sl. No. | Name of the Candidate | INT. NO. | D_O_B | RESVN. /QUALN | MARKS |
|---|---|---|---|---|---|
| 2. | IMTIYAZAHAMED JAINEKHAN<br>S/O S J JAINEKHAN NO-212<br>NEAR BDA GARDEN VIVEK NAGAR<br>WEST BIJAPURA-586101 | 1 | 04.03.76 | CAT-1<br>B. PHARMA | 67.83 |

**NOTE:1.** The selection of all Candidates in this list is subject to the final decision of the Hon'ble Supreme Court of India in W A(Civil)232/99 relating to women reservation.

**V.B. PATIL**

P.R. 334

Secretary, Karnataka Public Service Commission.

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು–04**

**ಪ್ರಕಟಣೆ**

**ಸಂ/ತೋಇ/ತೋಜಂನಿ(ಹನೀ)/ಸತೋಅ–1/140/08–09, ದಿನಾಂಕ: 4ನೇ ಮೇ 2009**

**ವಿಷಯ:** 2009–10ನೇ ಸಾಲಿನ ಕೇಂದ್ರ ಪುರಸ್ಕೃತ ಮೈಕ್ರೋ ಇರಿಗೇಷನ್ ಯೋಜನೆಯಡಿ ಹನಿ ನೀರಾವರಿ ಮತ್ತು ಸ್ಪ್ರಿಂಕ್ಲರ್ ಉಪಕರಣಗಳ ಉತ್ಪಾದಕರ ನೊಂದಣಿ.

2009–10ನೇ ಸಾಲಿನ ಕೇಂದ್ರ ಪುರಸ್ಕತ ಸೂಕ್ಷ್ಮ ಮೈಕ್ರೋ ಇರಿಗೇಷನ್ ಯೋಜನೆಯಡಿ ರಾಜ್ಯಾದ್ಯಂತ ರೈತರ ತಾಕಿನಲ್ಲಿ ಹನಿ ನೀರಾವರಿ ಮತ್ತು ಸ್ಪ್ರಿಂಕ್ಲರ್ ಉಪಕರಣ ಅಳವಡಿಸಲು ಕಂಪನಿ ಉತ್ಪಾದಕರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಈ ಯೋಜನೆಯ ಒಟ್ಟು ಅಂದಾಜು ಮೊತ್ತ ರೂ.80.00 ಕೋಟಿ ಇರುತ್ತದೆ. ಆಸಕ್ತಿಯುಳ್ಳವರು ತೋಟಗಾರಿಕೆ ಜಂಟಿ ನಿರ್ದೇಶಕರು (ಹನಿ ನೀರಾವರಿ) ಲಾಲ್‌ಬಾಗ್, ಬೆಂಗಳೂರು ಈ ಕಛೇರಿಯಿಂದ ನೋಂದಣಿ ಪ್ರಪತ್ರವನ್ನು ಮತ್ತು ನಿಬಂಧನೆಗಳ ವಿವರಗಳನ್ನು ಪಡೆಯಬಹುದು. ಅರ್ಜಿದಾರರು ಹನಿ ನೀರಾವರಿ ಮತ್ತು ಸ್ಪ್ರಿಂಕ್ಲರ್ ಕಾಂಪೋನೆಂಟ್‌ಗಳಿಗೆ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಬೇಕು. ನೋಂದಣಿ ಪ್ರಪತ್ರದ ಶುಲ್ಕ ರೂ.300/– ಮಾತ್ರ ಇದ್ದು, ಎಲ್ಲಾ ಕೆಲಸದ ದಿನಗಳಲ್ಲಿ ಬೆಳಿಗ್ಗೆ 10.00 ರಿಂದ ಸಂಜೆ 5.00 ರವರೆಗೆ ಪಡೆಯಬಹುದಾಗಿರುತ್ತದೆ. ನೋಂದಣಿ ಶುಲ್ಕ ಹನಿ ನೀರಾವರಿಗಾಗಿ ರೂ.30,000/– ಮತ್ತು ಸ್ಪ್ರಿಂಕ್ಲರ್‌ಗಾಗಿ ರೂ.25,000/– ಪಾವತಿಸಬೇಕು. ನೋಂದಣಿಗಾಗಿ ಅರ್ಜಿ ಸಲ್ಲಿಸಲು ದಿನಾಂಕ: 30.05.09 ಕೊನೆಯ ದಿನವಾಗಿರುತ್ತದೆ.

ಕರಡು ನಿರ್ದೇಶಕರಿಂದ ಅನುಮೋದಿಸಿದೆ.

ತೋಟಗಾರಿಕೆ ನಿರ್ದೇಶಕರು,
ಮತ್ತು ಮಿಷನ್ ನಿರ್ದೇಶಕರ ಪರವಾಗಿ, ಕರ್ನಾಟಕ ರಾಜ್ಯ ತೋಟಗಾರಿಕೆ ಮಿಷನ್.

**HORTICULTURE DEPARTMENT**

**Directorate of Horticulture, Lalbagh, Bangalore-4**

**NOTIFICATION**

**No.DH/JDH/(Drip)/AHO/140/2008-09, Dated: 2nd May 2009**

**Sub:** Registration of Drip irrigation & Sprinkler equipment Manufactures for laying out Drip /Sprinkler system under Centrally Sponsored Scheme for Micro Irrigation for the year 2009-10.

Applications are invited from reputed companies for registration of Drip Irrigation & Sprinkler equipment manufactures subject to following conditions to install Drip /Sprinkler system in the farmer's, field through out the state, under the Centrally sponsored Scheme on Micro Irrigation for the 2009-10. The total estimated project outlay is around Rs.80.00 crores. The interested parties may obtain the registration forms and the terms and conditions from the office of Joint Director of Horticulture (Drip Irrigation) Lalbagh, Bangalore-4. The manufacturers have to apply separately for drip & sprinkler components. The fee for each registration form is Rs.300/-. Registration fee for Drip Irrigation is Rs.30,000/- and for Sprinkler Irrigation Rs.25,000/-. The registration forms may be obtained on all working days from 10 A.M to 5 P.M. The last date for submitted the filled registration forms is 30.05.09.

For Director of Horticulture & Mission Director
Karnataka State Horticulture Mission.

P.R. 335

**ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು – 570 006.**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ ಸಂಖ್ಯೆ : ಕರಾಮುವಿ/ಸಿಪಾವಿ/04–1098/2009–10, ದಿನಾಂಕ: 11ನೇ ಮೇ 2009**

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ "2009–2010ನೇ ಸಾಲಿನ ವಿವಿಧ ಶಿಕ್ಷಣ ಕ್ರಮಗಳ ವಿವರಣಾ ಪುಸ್ತಕಗಳನ್ನು ಮುದ್ರಿಸಿ, ಸರಬರಾಜುಮಾಡಿಕೊಳ್ಳಲು, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಲ್ಲಿ ಮುದ್ರಣ ಕೆಲಸ ನಿರ್ವಹಿಸಿ, ಬಹುವರ್ಣದ ಆಫ್‌ಸೆಟ್ ಮುದ್ರಣಯಂತ್ರ ಹೊಂದಿರುವ ಅನುಭವಿ ಖಾಸಗಿ ಮುದ್ರಕರಿಂದ **"ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳ ಪಾರದರ್ಶಕತೆ ಅಧಿನಿಯಮ ಮತ್ತು ನಿಯಮಗಳಿಗೆ"** ಅನುಗುಣವಾಗಿ ದರಪಟ್ಟಿ ಕರೆಯಲಾಗಿದೆ.

ದರಪಟ್ಟಿ ಸಲ್ಲಿಸಲು ಇಚ್ಛಿಸುವ ಮುದ್ರಕರು ಟೆಂಡರ್ ಫಾರಂಅನ್ನು ಪಡೆಯಲು **ರೂ. 300/– (ಮಾರಾಟ ತೆರಿಗೆ ಸೇರಿದಂತೆ)** ಗಳನ್ನು ಕರಾಮುವಿ "200" ಸಾಮಾನ್ಯ ನಿಧಿಯ ಚಲನ್‌ನಲ್ಲಿ ಭರ್ತಿಮಾಡಿ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಅಥವಾ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಇಲ್ಲಿ ಪಾವತಿಸಿ, (ಹಿಂದಿರುಗಿಸಲಾಗುವುದಿಲ್ಲ) ಪಾವತಿಸಿದ "200" ಸಾಮಾನ್ಯ ನಿಧಿಯ ಚಲನ್‌ನ ಕಛೇರಿ ಪ್ರತಿಯನ್ನು **"ಉಪಕುಲಸಚಿವ (ಸಿದ್ಧಪಾಠ), ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು–06",** ಇವರಿಗೆ ನೀಡಿ, ದರಪಟ್ಟಿ ಸಂಪೂರ್ಣ ವಿವರಗಳು ಮತ್ತು ಸ್ಪೆಸಿಫಿಕೇಷನ್ಸ್ ಹಾಗೂ ಷರತ್ತುಗಳನ್ನೊಳಗೊಂಡ ಟೆಂಡರ್ ಫಾರಂ ಅನ್ನು ಪಡೆಯುವುದು. ಈ ರೀತಿ ಪಡೆದ ಟೆಂಡರ್ ಫಾರಂ ಅನ್ನು ಕೂಲಂಕಷವಾಗಿ ಓದಿ, ತಿಳಿದು ಟೆಂಡರ್ ಫಾರಂನಲ್ಲಿನ ಷರತ್ತುಗಳಿಗೆ ಬದ್ಧರಾಗಿ ಈ ಕೆಳಕಂಡ ರೀತಿಯಲ್ಲಿ ದರಪಟ್ಟಿ ಸಲ್ಲಿಸತಕ್ಕದ್ದು. ವಿ.ವಿ. ನಿಲಯದಲ್ಲಿ ಅಥವಾ ಯಾವುದೇ ಸಂಸ್ಥೆಗಳಲ್ಲಿ ಕಪ್ಪುಪಟ್ಟಿಗೆ ಸೇರಿರುವ ಮುದ್ರಣಾಲಯಗಳ ದರಪಟ್ಟಿಯನ್ನು ತಿರಸ್ಕರಿಸಲಾಗುತ್ತದೆ.

1) **"ಹಣಕಾಸು ಅಧಿಕಾರಿಗಳು", ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು–06",** ಅವರ ಹೆಸರಿನಲ್ಲಿ **ರೂ. 60,000/– (ರೂಪಾಯಿ ಅರವತ್ತು ಸಾವಿರ)** ಗಳ ಡಿಮ್ಯಾಂಡ್ ಡ್ರಾಫ್ಟನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು **ಭದ್ರತಾ ಠೇವಣಿಯಾಗಿ [EMD]** ಯಾಗಿ ದರಪಟ್ಟಿಯೊಂದಿಗೆ ಲಗತ್ತಿಸಬೇಕು. ಭದ್ರತಾ ಠೇವಣಿಗೆ ಯಾವುದೇ ರೀತಿಯ ಬಡ್ಡಿ ನೀಡುವುದಿಲ್ಲ.
2) **"2009–2010 ನೇ ಸಾಲಿನ ವಿವರಣಾ ಪುಸ್ತಕಗಳ ಮುದ್ರಣ ಸಂಬಂಧ ದರಪಟ್ಟಿ"** ಎಂಬುದಾಗಿ ಮೇಲ್ಬರಹ ಹೊಂದಿದ ಮೊಹರಾದ ಲಕೋಟೆಯನ್ನು ರಿಜಿಸ್ಟರ್ಡ್ ಅಂಚೆಯ ಮೂಲಕ ಅಥವಾ ಖುದ್ದಾಗಿ **"ಕುಲಸಚಿವರು, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು–06"** ಇವರ ಹೆಸರಿಗೆ ಸಲ್ಲಿಸತಕ್ಕದ್ದು. (ಅಂಚೆಯಿಂದಾಗುವ ವಿಳಂಬಕ್ಕೆ ವಿಶ್ವವಿದ್ಯಾನಿಲಯ ಜವಾಬ್ದಾರಿಯಲ್ಲ)
3) ಟೆಂಡರ್ ಫಾರಂ ಅನ್ನು ವಿ.ವಿ. ಯಿಂದ ನೀಡುವ ದಿನಾಂಕ:– **14/05/2009** ರಿಂದ ಕೊನೆಯ ದಿನಾಂಕದವರೆಗೆ.
4) ದರಪಟ್ಟಿಯನ್ನು ಸಲ್ಲಿಸುವ ಕೊನೆಯ **ದಿನಾಂಕ:– 27/05/2009** ರ **ಸಂಜೆ 4:00** ಗಂಟೆಯ ಒಳಗೆ.
5) ಮೊಹರಾದ ಲಕೋಟೆಯನ್ನು ತೆರೆಯುವ ದಿನಾಂಕ:– **29/05/2009** ರ **ಬೆಳಿಗ್ಗೆ 11:30** ಗಂಟೆಗೆ
6) ಮೇಲ್ಕಂಡ ದಿನಾಂಕಗಳಂದು ಒಂದು ವೇಳೆ ಸಾರ್ವತ್ರಿಕ ರಜೆ ದಿನವೆಂದು ಘೋಷಿಸಲ್ಪಟ್ಟರೆ, ಮುಂದಿನ ಕೆಲಸದ ದಿನ ಎಂದು ಭಾವಿಸುವುದು.
7) ಯಾವುದೇ ಅಥವಾ ಎಲ್ಲಾ ನಮೂದಿಸಿದ ದರಪಟ್ಟಿಗಳನ್ನು ಯಾವುದೇ ಕಾರಣಗಳನ್ನು ನೀಡದೇ ಸ್ವೀಕರಿಸುವ, ರದ್ದುಪಡಿಸುವ, ತಿರಸ್ಕರಿಸುವ ಅಧಿಕಾರವನ್ನು ವಿಶ್ವವಿದ್ಯಾನಿಲಯ ಹೊಂದಿರುತ್ತದೆ.

ಕುಲಸಚಿವ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು.

**KARNATAKA STATE OPEN UNIVERSITY, MANASAGANGOTRI, MYSORE – 570 006**

**SHORT TENDER NOTIFICATION**

**NO. KSOU/LSN/04-1098 /2009-10, Dated: 11th May 2009**

Sealed tender quotations are invited by Karnataka State Open University as per Karnataka transparency in public procurement act from experienced Printers with KSOU possessing multi colour printing machine for printing different prospectus booklets during 2009-10.

Tender forms along with terms and conditions and other details can be obtained from the Deputy Registrar (Lesson), KSOU, Mysore-06 by paying a fee of **Rs. 300 /- (Including Sales Tax)** to KSOU '200' General fund account through the KSOU '200' General challan at State Bank of Mysore or State Bank of India (non refundable). Experienced printers, who are interested in taking up this work may submit their rates as per the following conditions, after carefully studying the detailed terms and conditions. The printers who are in the blacklist of universities or any institutions that quotation will be rejected.

1. Printers should enclose a Demand Draft from any Nationalized Bank for **Rs.60,000/- (Rupees Sixty Thousand Only)** as Earnest Money Deposit in the favour of "The Finance officer, Karnataka State Open University, Manasagangotri, Mysore-06" payable at Mysore along with quotations. (No interest will be paid on the EMD)
2. Quotations must be submitted to "The Registrar, Karnataka State Open University, Manasagangotri, Mysore-06" either by registered post or in person as in sealed covers, super

scribe **“Quotation for printing prospectus booklets during 2009-10”.** The University will not be responsible for postal delay.

3. Tender forms issuing date from the University is **14/05/2009** up to last date.
4. Last date for submitting the quotations is **27/05/2009** up to **4 PM**.
5. Sealed covers will be opened on **29/05/2009** at **11:30 AM**
6. If any one of the dates below happens to be a general holiday, the next working day will hold good.
7. University reserves the right to accept or reject any or all Tenders as well as cancel the process without assigning any reason.

Registrar, Karnataka State Open University, Manasagangotri, Mysore.

**ವಿಷಯ:** ಕರಾಮುವಿಯ 2009–10ನೇ ಸಾಲಿನ ವಿವರಣಾ ಪುಸ್ತಕಗಳನ್ನು ಮುದ್ರಿಸಿ, ಸರಬರಾಜು ಮಾಡುವ ಬಗೆಗಿನ ಸಂಕ್ಷಿಪ್ತ ಟೆಂಡರ್ ಪ್ರಕಟಣೆಯನ್ನು ಪ್ರಕಟಿಸಬೇಕಾದ ವಿವರ.

**ಕ್ರಮಾಂಕ: ಟೆಂಡರ್ ಬುಲೆಟಿನ್ : 2009–10, ದಿನಾಂಕ: 11ನೇ ಮೇ 2009**

| ಕ್ರ. ಸಂ. | ಟೆಂಡರ್ ಹೊರಡಿಸಿದ ಪ್ರಾಧಿಕಾರ | ಟೆಂಡರ್ ಕ್ರಮಾಂಕ ಹಾಗೂ ದಿನಾಂಕ | ಕಾಮಗಾರಿಯ ವಿವರ | ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ. ಮೊತ್ತ (ರೂ. ಗಳಲ್ಲಿ) | ಟೆಂಡರ್ ಫಾರಂ ಗಳನ್ನು ವಿತರಿಸುವ ದಿನಾಂಕ | ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ | ಲಕೋಟೆಗಳನ್ನು ತೆರೆಯುವ ದಿನಾಂಕ | ಟೆಂಡರ್ ಸ್ವೀಕರಿಸುವ ಪ್ರಾಧಿಕಾರ |
|---|---|---|---|---|---|---|---|---|---|
| 01 | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು–06. | ಸಂಖ್ಯೆ : ಕರಾಮುವಿ : ಸಿಪಾವಿ : 04–1098 : 2009–10, ದಿನಾಂಕ: 11.05.09 | ವಿವವಿದ್ಯಾನಿಲಯದ 2009–10ನೇ ಸಾಲಿನ ವಿವರಣಾ ಪುಸ್ತಕಗಳನ್ನು ಮುದ್ರಿಸಿ, ಸರಬರಾಜು ಮಾಡುವ ಬಗ್ಗೆ. | 30,00,000/– (ಮೂವತ್ತು ಲಕ್ಷ) | 60,000/– (ಅರವತ್ತು ಸಾವಿರ) | 14.5.2009 ರಿಂದ | 27.5.2009 ಸಂಜೆ 4.00 ಗಂಟೆಗೆ | 29.5.2009 ಬೆಳಿಗ್ಗೆ 11.30ಕ್ಕೆ | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು–06. |

ಪಿ.ಡಿ. 63 ಕುಲಸಚಿವ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು.

**ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು – 570 006.**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ ಸಂಖ್ಯೆ : ಕರಾಮುವಿ/ಸಿಪಾವಿ/02–1099/2009–10, ದಿನಾಂಕ : 13ನೇ ಮೇ 2009**

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ **“2009–2010 ನೇ ಸಾಲಿನ ವಿವಿಧ ಶಿಕ್ಷಣಕ್ರಮಗಳ ಸಿದ್ಧಪಾಠ, ಪರೀಕ್ಷೆಗಳಿಗೆ ಬೇಕಾದ ವಿವಿಧ ಫಾರಂ, ಉತ್ತರ ಪತ್ರಿಕೆ ಹಾಗೂ ಕಛೇರಿ ಕೆಲಸಗಳಿಗೆ ಬೇಕಾದ ವಿವಿಧ ಪರಿಕರಗಳನ್ನು”** ಅಂದಾಜು ಮೊತ್ತ ಐದು ಕೋಟಿ ರೂಪಾಯಿಗಳಲ್ಲಿ ಮುದ್ರಿಸಿ ಸರಬರಾಜುಮಾಡಲು ಕನಿಷ್ಠ ಐದು ವರ್ಷ ಮುದ್ರಣದ ಅನುಭವವಿರುವ ಆಫ್‌ಸೆಟ್/ ವೆಬ್ ಆಫ್‌ಸೆಟ್ ಮುದ್ರಣಯಂತ್ರ ಹೊಂದಿರುವ ಖಾಸಗಿ, ಸರ್ಕಾರದ ಅಂಗ ಸಂಸ್ಥೆಗಳ ಮುದ್ರಕರಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮಗಳು 2000 ಹಾಗೂ ಸರ್ಕಾರದ ಆದೇಶ, ಸುತ್ತೋಲೆಗಳಿಗೆ ಬದ್ಧರಾಗಿ **“ಎರಡು ಲಕೋಟೆ ಪದ್ಧತಿ”**ಯಲ್ಲಿ ದರಪಟ್ಟಿ ಕರೆಯಲಾಗಿದೆ.

ದರಪಟ್ಟಿ ಸಲ್ಲಿಸಲು ಇಚ್ಚಿಸುವ ಮುದ್ರಕರು ಟೆಂಡರ್ ಫಾರಂಅನ್ನು ಪಡೆಯಲು ರೂ.1,000/– (ಮಾರಾಟ ತೆರಿಗೆ ಸೇರಿದಂತೆ) ಗಳನ್ನು ಕರಾಮುವಿ “200” ಸಾಮಾನ್ಯ ನಿಧಿಗೆ ವಿವಿಯ ಚಲನ್‌ನಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ ಪಾವತಿಸುವುದು (ಹಿಂದಿರುಗಿಸಲಾಗುವುದಿಲ್ಲ) ಅರ್ಜಿಶುಲ್ಕ ಪಾವತಿಯ ಕಛೇರಿ ಪ್ರತಿಯನ್ನು ಉಪಕುಲಸಚಿವ (ಸಿದ್ಧಪಾಠ), ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು–06, ಇವರಿಗೆ ಕಛೇರಿ ವೇಳೆಯಲ್ಲಿ ಸಲ್ಲಿಸಿ ದರಪಟ್ಟಿ ಸಂಬಂಧದ ಸಂಪೂರ್ಣ ವಿವರ ಮತ್ತು ಷರತ್ತುಗಳನ್ನೊಳಗೊಂಡ ಅರ್ಜಿಗಳನ್ನು ಪಡೆಯುವುದು. ಈ ರೀತಿ ಪಡೆದ ಟೆಂಡರ್ ಫಾರಂ ಅನ್ನು ಕೂಲಂಕಷವಾಗಿ ಓದಿ ತಿಳಿದು ಅದರಲ್ಲಿನ ಷರತ್ತು, ಸ್ಪೆಸಿಫಿಕೇಷನ್‌ಗಳಿಗೆ ಬದ್ಧರಾಗಿ ಈ ಕೆಳಕಂಡ ರೀತಿಯಲ್ಲಿ ದರಪಟ್ಟಿ ಸಲ್ಲಿಸತಕ್ಕದ್ದು. ಮೇಲೆ ತಿಳಿಸಿದ ಅಧಿನಿಯಮ 1999 ಮತ್ತು 2000 ಸರ್ಕಾರದ ಆದೇಶ, ಸುತ್ತೋಲೆ ಹಾಗೂ ವಿಶ್ವವಿದ್ಯಾನಿಲಯದ ನಿಯಮಗಳಿಗೆ ಬದ್ಧರಾಗಿ ಟೆಂಡರ್‌ಗಳನ್ನು ಸಲ್ಲಿಸಬೇಕು. ಆದೇಶ ನಿಯಮಗಳ ಉಲ್ಲಂಘನೆಯಾದಲ್ಲಿ ಟೆಂಡರ್‌ಗಳನ್ನು ಯಾವುದೇ ಸೂಚನೆ ಇಲ್ಲದೇ ತಿರಸ್ಕರಿಸಲಾಗುತ್ತದೆ ಹಾಗೂ ವಿಶ್ವವಿದ್ಯಾನಿಲಯದ ಮಟ್ಟದಲ್ಲಿ, ಯಾವುದೇ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಲ್ಲಿ ಕಪ್ಪುಪಟ್ಟಿಗೆ ಸೇರಿರುವ ಮುದ್ರಣಾಲಯಗಳ ದರಪಟ್ಟಿಯನ್ನು ತಿರಸ್ಕರಿಸಲಾಗುತ್ತದೆ. ಈ ಬಗ್ಗೆ ಯಾವುದೇ ಪತ್ರ ವ್ಯವಹಾರಕ್ಕೂ ಅವಕಾಶವಿರುವುದಿಲ್ಲ.

1) **“ಹಣಕಾಸು ಅಧಿಕಾರಿಗಳು”, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು–06,** ಅವರ ಹೆಸರಿನಲ್ಲಿ **ರೂ. 1,00,000/– (ರೂಪಾಯಿ ಒಂದು ಲಕ್ಷ ಮಾತ್ರ)** ಗಳ ಡಿಮ್ಯಾಂಡ್ ಡ್ರಾಫ್ಟನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಭದ್ರತಾ ಠೇವಣಿಯಾಗಿ (EMD) ದರಪಟ್ಟಿಯೊಂದಿಗೆ ಲಗತ್ತಿಸತಕ್ಕದ್ದು. ಭದ್ರತಾ ಠೇವಣಿಗೆ ಯಾವುದೇ ಬಡ್ಡಿ ನೀಡುವುದಿಲ್ಲ. ಟೆಂಡರ್ ನಿಯಮಗಳನ್ನು ಪೂರ್ಣವಾಗಿ ಪಾಲಿಸುವ ಷರತ್ತಿನ ಮೇಲೆ ಭದ್ರತಾ ಠೇವಣಿಯನ್ನು ಹಿಂದಿರುಗಿಸುವ ಬಗ್ಗೆ ಕ್ರಮಕೈಗೊಳ್ಳಲಾಗುವುದು.

2) **"2009–2010 ನೇ ಸಾಲಿನ ವಿವಿಧ ಶಿಕ್ಷಣಕ್ರಮಗಳ ಸಿದ್ಧಪಾಠ, ಪರೀಕ್ಷೆಗಳಿಗೆ ಬೇಕಾದ ವಿವಿಧ ಫಾರಂ, ಉತ್ತರ ಪತ್ರಿಕೆ ಹಾಗೂ ಕಛೇರಿ ಕೆಲಸಗಳಿಗೆ ಬೇಕಾದ ವಿವಿಧ ಪರಿಕರಗಳನ್ನು ಮುದ್ರಿಸುವ ಸಂಬಂಧದ ದರಪಟ್ಟಿ"** ಎಂದು ಮೇಲ್ಬರಹ ಹೊಂದಿದ ಮೊಹರಾದ ಲಕೋಟೆಯನ್ನು ರಿಜಿಸ್ಟರ್ಡ್ ಅಂಚೆಯ ಮೂಲಕ ಅಥವಾ ಖುದ್ದಾಗಿ **"ಕುಲಸಚಿವ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು–06"** ಇವರ ಹೆಸರಿಗೆ ಕಳುಹಿಸತಕ್ಕದ್ದು. ಅಂಚೆಯಿಂದಾಗುವ ವಿಳಂಬಕ್ಕೆ ವಿಶ್ವವಿದ್ಯಾನಿಲಯ ಜವಾಬ್ದಾರಿಯಲ್ಲ.
3) ದರಪಟ್ಟಿಯ ಟೆಂಡರ್ ಫಾರಂಅನ್ನು ಮಾರಾಟಕ್ಕೆ ವಿ.ವಿ. ಯಿಂದ ನೀಡುವ **ದಿನಾಂಕ :– 15/05/2009** ರಿಂದ ಕೊನೆಯ ದಿನಾಂಕದವರೆವಿಗೆ.
4) ದರಪಟ್ಟಿಯನ್ನು ಸಲ್ಲಿಸುವ ಕೊನೆಯ ದಿನಾಂಕ :– **18/06/2009** ಸಂಜೆ **4 ಗಂಟೆಯ ವರೆಗೆ.**
5) ಮೊಹರಾದ ಲಕೋಟೆಯನ್ನು ತೆರೆಯುವ ದಿನಾಂಕ :– **22/06/2009** ರ **ಬೆಳಿಗ್ಗೆ 11:30ಕ್ಕೆ.**
6) ಮೇಲ್ಕಂಡ ದಿನಾಂಕಗಳಂದು ಒಂದು ವೇಳೆ ಸಾರ್ವತ್ರಿಕ ರಜೆ ಬಂದಲ್ಲಿ ನಂತರದ ದಿನವನ್ನು ಕಛೇರಿ ಕೆಲಸದ ದಿನವೆಂದು ಪರಿಗಣಿಸತಕ್ಕದ್ದು.
7) ಯಾವುದೇ ಅಥವಾ ಎಲ್ಲಾ ನಮೂದಿಸಿದ ದರಪಟ್ಟಿಗಳನ್ನು ಯಾವುದೇ ಕಾರಣಗಳನ್ನು ನೀಡದೇ ಸ್ವೀಕರಿಸುವ, ರದ್ದುಪಡಿಸುವ, ತಿರಸ್ಕರಿಸುವ ಅಧಿಕಾರವನ್ನು ವಿಶ್ವವಿದ್ಯಾನಿಲಯ ಹೊಂದಿರುತ್ತದೆ.

ಕುಲಸಚಿವ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು.

**KARNATAKA STATE OPEN UNIVERSITY, MANASAGANGOTRI, MYSORE – 570 006**

**SHORT TENDER NOTIFICATION NO.KSOU/LSN/02-1099 /2009-10, Dated : 13th May 2009**

Sealed tender quotations are invited in **"Two Cover System"** by Karnataka State Open University for the year 2009-2010 as per the Karnataka transparency in public procurement act 1999 and rules 2000 from private, Government Affiliated Association printers to print and transport the study materials of different programs, different examination forms, answer sheets and essential office equipments. The estimated cost of this work is about Rs. Five crores, in this connection at least five years of experience in printing and as well as offset, web offset, printing machines, owned by private printers.

Tender forms along with terms and conditions and other details can be obtained from the Deputy Registrar (Lesson Section), Karnataka State Open University, Mysore-06 by paying a non refundable fee of Rs.1,000/- (Including Sales Tax) to KSOU '200' General fund account through KSOU '200' General fund Challan at State Bank of Mysore / State Bank of India. Printers who are interested to submit their price list for the above mentioned work. Shall carefully read the detailed terms and conditions mentioned in tender form. Tender should be submitted according to the above mentioned 1999 and 2000 Government Order, Circular and Rules of the University. Tenders will be rejected without giving any reason if the rules are violated. Price lists of printers blacklisted at the University level in any Government under taking institution, will be rejected. No letter correspondence is entertained in this regard.

1. Printers should enclose a Demand Draft from any Nationalized Bank along with the application for Rs.1,00,000/- (Rupees One Lakh Only) as Earnest Money Deposit in the favour of "The Finance Officer, Karnataka State Open University, Manasagangotri, Mysore-06" payable at Mysore. No interest will be paid on the EMD.
2. Quotations must be submitted to "The Registrar, Karnataka State Open University, Manasagangotri, Mysore-06" either by registered post or in person as in sealed covers, superscription **"Quotation for Printing of lessons of different programmes, examination forms, Answers Sheets and essential office equipments for the year 2009-2010".** The University will not be held responsible for any postal delay.
3. Tender forms issuing date from the University is **15/05/2009** up to last date.
4. Last date for submitting the pricelist / quotations is on **18/06/2009** up to **4 P.M.**
5. Sealed covers will be opened on **22/06/2009** at **11:30 A.M.**
6. If any one of the dates mentioned above happens to be a general holiday, the next working day will hold good.
7. The University reserves the right to accept or reject any or all quotations as well as cancel the process without assigning any reason whatsoever.

Registrar, Karnataka State Open University, Manasagangotri, Mysore.

**ವಿಷಯ:** ಕರಾಮುವಿಯ 2009–10ನೇ ಸಾಲಿನ ವಿವರಣಾ ಪುಸ್ತಕಗಳನ್ನು ಮುದ್ರಿಸಿ, ಸರಬರಾಜು ಮಾಡುವ ಬಗೆಗಿನ ಸಂಕ್ಷಿಪ್ತ ಟೆಂಡರ್ ಪ್ರಕಟಣೆಯನ್ನು ಪ್ರಕಟಿಸಬೇಕಾದ ವಿವರ.

**ಕ್ರಮಾಂಕ: ಟೆಂಡರ್ ಬುಲೆಟಿನ್ : 2009–10, ದಿನಾಂಕ: 13ನೇ ಮೇ 2009**

| ಕ್ರ. ಸಂ. | ಟೆಂಡರ್ ಹೊರಡಿಸಿದ ಪ್ರಾಧಿಕಾರ | ಟೆಂಡರ್ ಕ್ರಮಾಂಕ ಹಾಗೂ ದಿನಾಂಕ | ಕಾಮಗಾರಿಯ ವಿವರ | ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ. ಮೊತ್ತ (ರೂ. ಗಳಲ್ಲಿ) | ಟೆಂಡರ್ ಫಾರಂ ಗಳನ್ನು ವಿತರಿಸುವ ದಿನಾಂಕ | ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ | ಲಕೋಟೆ ಗಳನ್ನು ತೆರೆಯುವ ದಿನಾಂಕ | ಟೆಂಡರ್ ಸ್ವೀಕರಿಸುವ ಪ್ರಾಧಿಕಾರ |
|---|---|---|---|---|---|---|---|---|---|
| 01 | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು–06. | ಸಂಖ್ಯೆ : ಕರಾಮುವಿ : ಸಿಪಾವಿ : 02–1099 : 2009–10, ದಿನಾಂಕ: 13.05.09 | ವಿವವಿದ್ಯಾನಿಲಯದ 2009–10ನೇ ಸಾಲಿನ ವಿವಿಧ ಶಿಕ್ಷಣಕ್ರಮಗಳ ಸಿದ್ಧಪಾಠ, ಪರೀಕ್ಷೆಗಳಿಗೆ ಬೇಕಾದ ವಿವಿಧ ಫಾರಂ, ಉತ್ತರಪತ್ರಿಕೆ ಹಾಗೂ ಕಛೇರಿ ಕೆಲಸಗಳಿಗೆ ಬೇಕಾದ ವಿವಿಧ ಪರಿಕರಗಳನ್ನು ಮುದ್ರಿಸಿ, ಸರಬರಾಜು ಮಾಡುವ ಬಗ್ಗೆ | 5,00,00,000/– (ರೂಪಾಯಿ ಐದು ಕೋಟಿ ಮಾತ್ರ) | 1,00,000– (ರೂಪಾಯಿ ಒಂದು ಲಕ್ಷ ಮಾತ್ರ) | 15.5.2009 ರಿಂದ | 18.6.2009 ಸಂಜೆ 4.00 ಗಂಟೆಗೆ | 22.6.2009 ಬೆಳಿಗ್ಗೆ 11.30ಕ್ಕೆ | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು–06. |

ಪಿ.ಡಿ. 64 ಕುಲಸಚಿವ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು.

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು

**ಟೆಂಡರ್ ಪಕಟಣೆ ಸಂಖ್ಯೆ:ತೋಉನಿ/ಕಉ/ವಿನಿ2/01/2009–10, ದಿನಾಂಕ: 4ನೇ ಮೇ 2009**

ಕಬ್ಬನ್ ಉದ್ಯಾನವನದ ನರ್ಸರಿಯಲ್ಲಿ ವಿಸ್ತರಿಸುತ್ತಿರುವ ನೆರಳು ಉದ್ಯಾನವನಕ್ಕೆ ತುಂತುರು ನೀರಾವರಿ ವ್ಯವಸ್ಥೆ ಹಾಗೂ ಪೈಪ್ ಲೈನ್ ಅಳವಡಿಕೆ ಮಾಡಲು ಭೂದೃಶ್ಯ ವಿಭಾಗ, ಲಾಲ್‌ಬಾಗ್ ರವರ ಅಂದಾಜುಪಟ್ಟಿಯ ರೀತಿ ಕೆಲಸ ನಿರ್ವಹಿಸ ಬೇಕಾಗಿರುತ್ತದೆ. ಈ ಬಗ್ಗೆ ಅಧಿಕೃತ ಸಂಸ್ಥೆ/ಕ್ಲಾಸ್ 1 ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಇಚ್ಛಿಸುವವರು ಈ ಕೆಳಗೆ ತಿಳಿಸಿದ ವಿವರಗಳ ರೀತಿ ಈ ಕಛೇರಿಯಿಂದ ದಿನಾಂಕ: 29–05–2009 ರಿಂದ 01–06–2009 ರ ವರೆಗೆ ಈ ಕಛೇರಿಯಿಂದ ಟೆಂಡರ್ ಫಾರಂಗಳನ್ನು ಪಡೆದು ದಿನಾಂಕ:02–06–2009 ರ ಸಂಜೆ 3.00 ಗಂಟೆಗೆ ಟೆಂಡರ್‌ಗಳನ್ನು ಈ ಕಛೇರಿಗೆ ಸಲ್ಲಿಸಬೇಕು.

| SI | PARTICULERS | UNIT/QTY |
|---|---|---|
| 1 | Providing and supplying 2" finolex brand 6 kg Pressure heavy duty pvc pipe ISI Mark with necessary collars, Mta, Fta etc, complete As per directions of the officer in charge of work. | 770.RMT. |
| 2 | Providing and supplying 21/2" finolex brand 6 kg Pressure heavy duty pvc pipe ISI Mark with necessary collars, Fta etc, complete As per directions of the officer in charge of work. | 125.RMT. |
| 3 | Supplying 2” ball valve finolex make | 10.Nos. |
| 4 | Supplying 2” brass gate valve ISI make & Quality.. | 6.Nos. |
| 5 | Supplying 2X3/4” saddles finolex make with Necessary nut-bolts, rubber, gasket etc. | 90.Nos. |
| 6 | Supplying 1” brass gate valve ISI make & Quality.. | 10.Nos. |
| 7 | Supplying 1"GI bend ISI make | 10.Nos. |
| 8 | Supplying GI pipe B class ISI make. | 22 RMT. |
| 9 | Earth work excavation for pipe line Trenches in hard soil 875 × 0.45 × 0.45 | 177.18 CUM |
| 10 | Refilling the pipe line trenches with Valuable Excavated soil | 177.18 CUM |
| 11 | Providing and supplying fixing installing and Commissioning of pop – up sprinklers (Rain bird USA make) with necessary Accessories etc. complete as per directions. | 75.Nos. |
| 12 | Supplying & fixing 11/2" X 11/2" M.S. Chambers with bricks & concrete Work accessories. | 12.Nos. |
| 13 | Labour charges for installing Commissioning, Including Plumbing transportation, All other incidental Charges Etc. | 875.RMT |

**ಷರತ್ತು ಮತ್ತು ನಿಬಂಧನೆಗಳು:–**

1. ಭದ್ರತಾ ಠೇವಣಿ ರೂ. 10,000/– ಬ್ಯಾಂಕ್ ಡಿಮಾಂಡ್ ಡ್ರಾಫ್ಟನ್ನು ಸದಸ್ಯ ಕಾರ್ಯದರ್ಶಿಗಳು, **"ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನ"**, ಲಾಲ್‌ಬಾಗ್, ಬೆಂಗಳೂರು ಇವರ ಹೆಸರಿನಲ್ಲಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಸಲ್ಲಿಸಬೇಕು.
2. ನಿಗದಿಯಾದ ಸಮಯದೊಳಗೆ ನಿಮ್ಮ ಟೆಂಡರ್‌ಗಳನ್ನು ಈ ಕಛೇರಿಗೆ ತಲುಪಿಸಬೇಕು. ಅವಧಿ ಮೀರಿದ ನಂತರ ಬಂದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ.
3. ಆದೇಶ ಕೊಟ್ಟ 10 ದಿನಗಳೊಳಗೆ ಉತ್ತಮ ರೀತಿ ಸಂಬಂಧಪಟ್ಟ ವಿಭಾಗದ ಅಧಿಕಾರಿಗಳ /ಹಿರಿಯ ಸಹಾಯಕ ತೋಟಗಾರಿಕಾ ನಿರ್ದೇಶಕರು, ಭೂದೃಶ್ಯ ವಿಭಾಗ, ಲಾಲ್‌ಬಾಗ್, ಬೆಂಗಳೂರು ರವರ ಆದೇಶ ಅನುಸಾರ ಕೆಲಸ ನಿರ್ವಹಿಸಬೇಕು.
4. ಟೆಂಡರ್‌ಗಳನ್ನು ಒಪ್ಪುವ ಅಥವಾ ತಿರಸ್ಕರಿಸುವ ಪೂರ್ಣ ಅಧಿಕಾರ ತೋಟಗಾರಿಕೆ ನಿರ್ದೇಶಕರು ಲಾಲ್‌ಬಾಗ್, ಬೆಂಗಳೂರು ರವರು ಪಡೆದಿರುತ್ತಾರೆ.
5. ನಿಯಮಾನುಸಾರ ಬಿಲ್ಲಿನ ಮೂಲದಲ್ಲಿ ಅನ್ವಯವಾಗುವ ತೆರಿಗೆಗಳನ್ನು ಕಟಾಯಿಸಲಾಗುವುದು.
6. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ದಿನಾಂಕ:29–05–2009 ರಿಂದ 01–06–2009 ರವರೆಗೆ ರೂ.500–00 ಪಾವತಿಸಿ ಪಡೆಯಬಹುದು.
7. ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ:02–06–2009 ರಂದು 3.00 ಗಂಟೆಯವರೆಗೆ ಹಾಗೂ ಅಂದೇ ಸಂಜೆ 4.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
8. ವಿದ್ಯುತ್ ಇಲಾಖೆಯಿಂದ ಪಡೆದ ಪರವಾನಗಿ (ಲೈಸೆನ್ಸ್) ಇರುವವರು ಮಾತ್ರ ಟೆಂಡರ್‌ನ್ನು ಸಲ್ಲಿಸಲು ಅರ್ಹರಾಗಿರುತ್ತಾರೆ/ವಿದ್ಯುತ್ ಪರವಾನಗಿ (ಲೈಸೆನ್ಸ್) ಇರುವುದನ್ನು ಖಾತರಿ ಪಡಿಸಿಕೊಂಡ ನಂತರವೇ ಟೆಂಡರ್‌ಫಾರಂನ್ನು ವಿತರಿಸಲಾಗುವುದು.
9. ಸದರಿ ಕೆಲಸ ನಿರ್ವಹಿಸಿರುವ ಬಗ್ಗೆ ಸಂಬಂಧಪಟ್ಟ/ಲೋಕೋಪಯೋಗಿ ಇಲಾಖೆ/ತೋಟಗಾರಿಕೆ ಇಲಾಖೆ/ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಿಂದ ಪಡೆದ ಅನುಭವ ದೃಢೀಕರಣ ಪತ್ರವನ್ನು ಟೆಂಡರ್ ಜೊತೆಯಲ್ಲಿ ಸಲ್ಲಿಸಬೇಕು.
10. ಹೆಚ್ಚಿನ ಮಾಹಿತಿಯನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು, ರವರ ಕಛೇರಿ ವೇಳೆಯಲ್ಲಿ ಪಡೆಯಬಹುದು.

ಪಿ.ಆರ್. 337 ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು.

## ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು–1.

**ಟೆಂಡರ್ ಪ್ರಕಟಣೆ ಸಂಖ್ಯೆ/ತೋಉನಿ/ಕಉ/ವಿನಿ2/108/2008–09. ದಿನಾಂಕ: 6ನೇ ಮೇ 2009**

ಕಬ್ಬನ್ ಉದ್ಯಾನವನದ ಪ್ರವೇಶ ದ್ವಾರಗಳು ಸೇರಿದಂತೆ ಉದ್ಯಾನವನದ ಸಂಪೂರ್ಣ ಸುರಕ್ಷತೆಯನ್ನು ಕಾಪಾಡಲು ಆಂತರಿಕ ಭದ್ರತಾ ಸೇವೆಯನ್ನು 1 ವರ್ಷದ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಪಡೆಯಲು ನೊಂದಾಯಿತ ಸೆಕ್ಯೂರಿಟಿ ಏಜನ್ಸಿಯವರುಗಳಿಂದ ದ್ವಿಲಕೋಟೆ ಪದ್ದತಿಯಲ್ಲಿ (Technical & financial) ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಕಬ್ಬನ್ ಉದ್ಯಾನವನದಲ್ಲಿನ ಯಾವುದೇ ಸಸ್ಯ ಸಂಪತ್ತು ಅಥವಾ ಸಾಮಗ್ರಿಗಳ ಕಳ್ಳತನ ಅಥವಾ ಉದ್ಯಾನವನದ ವ್ಯಾಪ್ತಿಯ ಅಮೂಲ್ಯ ಸಂಪತ್ತುಗಳನ್ನು ಕಾಪಾಡಲು, ಇತ್ಯಾದಿಗಳನ್ನು ಸಮರ್ಪಕವಾಗಿ ನಿಯಂತ್ರಿಸಲು ಅನುವಾಗುವಂತೆ, ಭದ್ರತಾ ಸೇವೆಯನ್ನು 3 ಪಾಳಿಯಲ್ಲಿ ಕನಿಷ್ಟ 60 ಭದ್ರತಾ ಸಿಬ್ಬಂದಿಯವರಿಂದ (ಒಂದು ಪಹರೆಗೆ 20 ಸಿಬ್ಬಂದಿಯಂತೆ 3 ಪಹರೆಗಳಲ್ಲಿ) ಈ ಕೆಳಗೆ ತಿಳಿಸಿದ ಪ್ರದೇಶಗಳಲ್ಲಿ, ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ನಿರ್ವಹಿಸಬೇಕು. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ದಿನಾಂಕ:02–06–2009 ರಿಂದ 04–06–2009 ವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ಒಂದು ಫಾರಂಗೆ ರೂ.500=00 ರಂತೆ ಪಾವತಿ ಮಾಡಿ ಪಡೆಯಬಹುದು. ಸೀಲ್ಡ್ ಮಾಡಿದ ಟೆಂಡರ್‌ಗಳನ್ನು ದಿನಾಂಕ: 05–06–2009 ರಂದು ಸಂಜೆ 3.00 ಗಂಟೆಯ ಒಳಗೆ ಈ ಕಛೇರಿಗೆ ಸಲ್ಲಿಸಬೇಕು. ಟೆಂಡರ್‌ಗಳನ್ನು ದಿನಾಂಕ:05–06–2009 ರಂದು ಸಂಜೆ 4.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

**ಕಬ್ಬನ್ ಉದ್ಯಾನವನದ ವಿವಿಧ ಸ್ಥಳಗಳಲ್ಲಿ ನಿರ್ವಹಿಸಲು ಸೂಚಿಸುವ ಭದ್ರತಾ ಸೇವೆಯ ಪ್ರದೇಶದ ವಿವರಗಳು :**

ಹಡ್ಸನ್ ಸರ್ಕಲ್ ದ್ವಾರ.
ಕ್ಯಾನ್ ಬೆಡ್ Y.M.C.A ಪ್ರದೇಶ.
ಕರಗದ ಕುಂಟೆ ಪ್ರದೇಶ.
ರಿಂಗ್ ವುಡ್ ವೃತ್ತ.
ಸೆಂಚುರಿ ಕ್ಲಬ್ ದ್ವಾರ.
ಗೋಪಾಲ ಗೌಡ ವೃತ್ತ.
ಹೈಕೋರ್ಟ್ ಗೇಟ್.
ಸಿದ್ದಲಿಂಗಯ್ಯ ಗೇಟ್.
ಗಜೆಬೊ ಪ್ರದೇಶ.
ಹೈಕೋರ್ಟ್ ಹಿಂಭಾಗದ ಪ್ರದೇಶ.
ಹೈಕೋರ್ಟ್ ಮುಂಭಾಗ ಪ್ರದೇಶ.
ವಿಧಾನ ಸೌಧ ಮುಂಭಾಗ.
ರಾಣಿಪಾರ್ಕ್ ಸರ್ಕಲ್ ದ್ವಾರ.
P.N.T. ಸರ್ಕಲ್ ದ್ವಾರ.
ತಾವರೆ ಕೊಳ ಪ್ರದೇಶ.
ಕಬ್ಬನ್ ಪಾರ್ಕ್ ನರ್ಸರಿ ಹಾಗೂ ಕಛೇರಿ.
ಪ್ರೆಸ್ ಕ್ಲಬ್ ಮುಂಭಾಗ.
ಫೌಂಟೆನ್ ಸರ್ಕಲ್
ಬ್ಯಾಂಡ್ ಸ್ಟ್ಯಾಂಡ್ ಪ್ರದೇಶ.
ಗ್ರಂಥಾಲಯ ಪ್ರದೇಶ.

**ನಿರ್ವಹಿಸಬೇಕಾದ ಭದತೆ ಸೇವೆಗಳು:–**

1. ವರ್ಷದ 365 ದಿನಗಳಲ್ಲಿ 24 ಗಂಟೆಗಳ ಸಂಪೂರ್ಣ ಭದ್ರತಾ ಸೇವೆಯನ್ನು ಕಬ್ಬನ್ ಉದ್ಯಾನವನದಲ್ಲಿ ನಿರ್ವಹಿಸಬೇಕು. ಕಬ್ಬನ್ ಉದ್ಯಾನವನದ ಮರ, ಗಿಡ, ಸಸಿಗಳು, ಎಲ್ಲಾ ಕಟ್ಟಡಗಳು, ತೋಟದಲ್ಲಿ ಸಾಮಾನು ಸರಂಜಾಮುಗಳು, ಕುಂಡಗಳು ಹಾಗೂ ವಿದ್ಯುತ್ ದೀಪಗಳು, ಕೊಳವೆ ಬಾವಿಗಳು, ಮೋಟಾರ್ ಪಂಪುಗಳು, ವಾಹನಗಳು ಇತ್ಯಾದಿಗಳನ್ನು ಸರ್ವತೋಮುಖವಾಗಿ ಭದ್ರತೆ ನೀಡಿ ರಕ್ಷಿಸುವ ಕಾರ್ಯ ನಿರ್ವಹಿಸಬೇಕು.
2. ಕಬ್ಬನ್ ಉದ್ಯಾನವನದಲ್ಲಿನ ಮರ, ಗಿಡ, ಸಸಿಗಳಿಗೆ ಹಾನಿ ಮಾಡುವುದು. ಮರ ಹತ್ತುವುದು, ಮರದ ಕೊಂಬೆಗಳಿಗೆ ಜೋತು ಬೀಳುವುದು, ಮರದ ಮೇಲೆ ಹೆಸರು ಕೆತ್ತುವುದು, ಸಸಿ ಹೂವುಗಳನ್ನು ಮತ್ತು ಕಾಯಿ ಹಣ್ಣು ಕೀಳುವುದು, ಕೊಂಬೆಗಳಿಗೆ ಉಯ್ಯಾಲೆ ಕಟ್ಟುವುದು ಇತ್ಯಾದಿ ಚಟುವಟಿಕೆಗಳನ್ನು ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ಗಿಡಗಳು, ಸಸಿಗಳು, ಬೀಜಗಳನ್ನು, ಹುಲ್ಲು ಇತ್ಯಾದಿಯನ್ನು ಸಂಗ್ರಹಿಸುವುದಾಗಲೀ ಅಥವಾ ಕಬ್ಬನ್ ಉದ್ಯಾನವನ ಹೊರಗೆ ಅಧಿಕೃತ ಅನುಮತಿ ಪತ್ರ ಇಲ್ಲದೆ ಸಾಗಿಸುವುದನ್ನು ನಿರ್ಬಂಧಿಸಬೇಕು.
3. ಕಬ್ಬನ್ ಉದ್ಯಾನವನದ ಒಳಗೆ ಅನಧಿಕೃತವಾಗಿ ಸಾರ್ವಜನಿಕರಿಗೆ ಬೀಜಗಳು, ಗಿಡಗಳು ಹಾಗೂ ತಿಂಡಿ ತಿನಿಸುಗಳು ಇತರೆ ಯಾವುದೇ ವಸ್ತುಗಳು / ಪದಾರ್ಥಗಳನ್ನು ಇಲಾಖಾ ನೌಕರರೇ ಆಗಲಿ ಅಥವಾ ಸಾರ್ವಜನಿಕರೇ ಆಗಲಿ ಮಾರಾಟ ಮಾಡುವುದನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು.
4. ಕಬ್ಬನ್ ಉದ್ಯಾನವನದ ಒಳಗೆ ಸರ್ಕಾರಿ ವಾಹನಗಳು ಮತ್ತು ಸರ್ಕಾರಿ ಕೆಲಸದ ಮೇಲೆ ಬರುವ ಖಾಸಗಿ ವಾಹನಗಳನ್ನು ಹೊರತುಪಡಿಸಿ ಖಾಸಗಿ ವಾಹನಗಳು ಪ್ರವೇಶ ಮಾಡುವುದು, ಕಬ್ಬನ್‌ಉದ್ಯಾನವನದ ಒಳಗೆ ಓಡಾಡುವುದು, ಎಲ್ಲೆಂದರಲ್ಲಿ ನಿಲುಗಡೆ ಮಾಡುವುದು, ದುರಸ್ಥಿಪಡಿಸುವುದು, ತೊಳೆಯುವುದು ಇತ್ಯಾದಿಗಳನ್ನು ನಿರ್ಬಂಧಿಸಬೇಕು.
5. ಕಬ್ಬನ್ ಉದ್ಯಾನವನದಲ್ಲಿರುವ ಕೊಳವೆ ಬಾವಿಗಳು, ವಿದ್ಯುತ್ ಮೋಟಾರ್ ಪಂಪ್‌ಗಳು, ವಿದ್ಯುತ್ ಪ್ಯಾನಲ್ ಬೋರ್ಡ್‌ಗಳು (ಕ್ಯೂಬಿಕಲ್ ಔಟ್‌ಡೋರ್ ಬಾಕ್ಸ್) ಸಸ್ಯಾಗಾರಗಳಲ್ಲಿ ವಿದ್ಯುತ್ ಮೋಟಾರ್‌ಗಳು ಮತ್ತು ಕಾರಂಜಿಗಳಿಗೆ ಅಳವಡಿಸಿದ ಚಾನಲ್ಸ್ ವಿದ್ಯುತ್ ಮೋಟಾರ್‌ಗಳು, ವಿದ್ಯುತ್ ಬಣ್ಣದ ದೀಪಗಳಿಗೆ ಮತ್ತು ಕುಡಿಯುವ ನೀರಿಗಾಗಿ ಅಳವಡಿಸಿರುವ ವಾಟರ್ ಸ್ಟೋರೇಜ್ ಟ್ಯಾಂಕ್ (ಸಿಂಟೆಕ್ಸ್ ಟ್ಯಾಂಕ್‌ಗಳು) ಸಸ್ಯ ತೋಟದಲ್ಲಿ ಅಳವಡಿಸಿರುವ ವಾಲ್ವ್‌ಗಳು, ನೀರಿನ ಕೊಳಾಯಿಗಳು ಇತ್ಯಾದಿಗಳಿಗೆ ಹಾನಿ ಆಗದಂತೆ ಮತ್ತು ಕಳವು ಆಗದಂತೆ ಸಂರಕ್ಷಿಸಬೇಕು.
6. ಉದ್ಯಾನವನದಲ್ಲಿ ಅಳವಡಿಸಿರುವ ತುಂತುರು ನೀರಾವರಿ / ಹನಿ ನೀರಾವರಿ ಪದ್ಧತಿಯಲ್ಲಿ ಅಳವಡಿಸಿರುವ ಉಪಕರಣಗಳಿಗೆ, ಕೊಳವೆ ಬಾವಿಗಳಿಗೆ ಹಾನಿ ಆಗದಂತೆ ಅಥವಾ ಕಳವು ಆಗದಂತೆ ಸಂರಕ್ಷಿಸಬೇಕು.
7. ಕಬ್ಬನ್ ಉದ್ಯಾನವನದ ಒಳಗಿನ ವಿದ್ಯುತ್ ದೀಪಗಳನ್ನು ಹಾಗೂ ದ್ವಾರಗಳಲ್ಲಿನ ಅಲಂಕಾರಿಕ ವಿದ್ಯುತ್ ದೀಪಗಳಿಗೆ ವಿದ್ಯುತ್ ಕೇಬಲ್ಸ್, ಕಂಟ್ರೋಲ್ ಸ್ವಿಚ್ ಬೋರ್ಡ್‌ಗಳಿಗೆ ಹಾನಿ ಆಗುವುದನ್ನು ಅಥವಾ ಕಳ್ಳತನ ಆಗುವುದನ್ನು ತಡೆಗಟ್ಟಬೇಕು.
8. ಕಬ್ಬನ್ ಉದ್ಯಾನವನದಲ್ಲಿ ಪಕ್ಷಿಗಳನ್ನು ಹಿಡಿಯುವುದು ಮತ್ತು ಫೌಂಟನ್‌ಗಳಲ್ಲಿ ಮಣ್ಣು, ಕಲ್ಲು, ಪ್ಲಾಸ್ಟಿಕ್ ಎಸೆಯುವುದು, ವಿಗ್ರಹಗಳನ್ನು ಪ್ರತಿಷ್ಠಾಪಿಸುವುದು ಇತ್ಯಾದಿಗಳನ್ನು ನಿರ್ಬಂಧಿಸಬೇಕು.
9. ಕಬ್ಬನ್ ಉದ್ಯಾನವನದ ಒಳಗೆ ಒಣಗಿದ ಮರದ ಎಲೆ, ಹುಲ್ಲು, ಮರದ ರೆಂಬೆಗಳಿಗೆ ಕಾಗದ ಕಾಂಪೋಸ್ಟ್, ಗುಂಡಿ ಇತ್ಯಾದಿಗಳಿಗೆ ಸಾರ್ವಜನಿಕರು / ದುಷ್ಕರ್ಮಿಗಳು ಬೆಂಕಿ ಹಚ್ಚದಂತೆ ಸಂಪೂರ್ಣವಾಗಿ ಎಚ್ಚರ ವಹಿಸಬೇಕು. ಆಕಸ್ಮಿಕವಾಗಿ ಬೆಂಕಿ ಬಿದ್ದಂತಹ ಸಮಯದಲ್ಲಿ ತಕ್ಷಣ ಆದ್ಯತಾ ಕ್ರಮ ಕೈಗೊಂಡು ಫೈರ್ ಸರ್ವಿಸ್‌ಗೆ ದೂರು ಸಲ್ಲಿಸಿ ಈ ಕಛೇರಿಗೂ ವರದಿ ಮಾಡಬೇಕು.
10. ಕಬ್ಬನ್ ಉದ್ಯಾನವನದ ಒಳಗೆ ಪ್ರವಾಸಿಗರು / ಸಾರ್ವಜನಿಕರು ಯಾವ ಸಮಯದಲ್ಲಿ ಆಗಲಿ ಮಲ–ಮೂತ್ರ ವಿಸರ್ಜನೆ ಮಾಡುವುದನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ಸಾಕಿದ/ಬೀದಿ ನಾಯಿಗಳನ್ನು ತರುವುದನ್ನು /ಬರುವುದನ್ನು ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ಅಳವಡಿಸಿರುವ ಮರದ ಸಿಮೆಂಟ್ /ಮೊಸಾಯಿಕ್ ಬೆಂಚುಗಳ ಮೇಲೆ ಮಲಗುವುದನ್ನು ಮತ್ತು ವ್ಯಾಯಾಮ ಮಾಡುವುದನ್ನು ನಿರ್ಬಂಧಿಸಬೇಕು.
11. ಕಬ್ಬನ್ ಉದ್ಯಾನವನದ ಒಳಗೆ ಅಧಿಕೃತ ಪರವಾನಗಿ ಇಲ್ಲದೆ ಚಲನ ಚಿತ್ರ / ಧಾರವಾಹಿ / ವೀಡಿಯೊ ಚಿತ್ರೀಕರಣ ಮಾಡುವುದನ್ನು ತಡೆಯಬೇಕು. ಕಬ್ಬನ್ ಉದ್ಯಾನವನದ ಒಳಗೆ ಶಾಸ್ತ್ರ ಹೇಳುವುದನ್ನು, ಅನಧಿಕೃತ ಮಾರ್ಗದರ್ಶಿಗಳನ್ನು (ಗೈಡ್ಸ್) ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ತೋಟಗಾರಿಕೆ ಚಟುವಟಿಕೆಗಳನ್ನು ಬಿಟ್ಟು ಯಾವುದೇ ಪ್ರಾರ್ಥನೆ ಮತೀಯ ಅಥವಾ ಸಭೆ ಸಮಾರಂಭ ಇನ್ನಿತರ ಚಟುವಟಿಕೆಗಳನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು. ಭಿಕ್ಷುಕರು ಭಿಕ್ಷಾಟನೆ ಮಾಡುವುದನ್ನು, ಧೂಮಪಾನ, ಮಧ್ಯಪಾನ, ಮಾದಕ ವಸ್ತುಗಳ ಸೇವನೆ, ಜೂಜು, ಲೈಂಗಿಕ ಚಟುವಟಿಕೆಗಳು ಇತ್ಯಾದಿಗಳನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು.
12. ಸಾರ್ವಜನಿಕರು ಹೊರಗಿನಿಂದ ಬೆಡ್ ಇತ್ಯಾದಿ ತಿನಿಸುಗಳನ್ನು ನಾಯಿಗಳಿಗೆ /ಕೋತಿಗಳಿಗೆ ಹಾಕುವುದು, ಕಾಗೆಗಳಿಗೆ, ಹಕ್ಕಿಗಳಿಗೆ ಕಾಳುಗಳನ್ನು ಹಾಕುವುದು ಮತ್ತು ಇರುವೆಗಳಿಗೆ ಸಕ್ಕರೆ ಹಾಕುವುದು ಇತ್ಯಾದಿಗಳನ್ನು ನಿರ್ಬಂಧಿಸಬೇಕು.

13. ಕಬ್ಬನ್ ಉದ್ಯಾನವನ ವೀಕ್ಷಣೆಗೆ ಬರುವಂತಹ ಪ್ರವಾಸಿಗರಿಗೆ ಯಾವುದೇ ಸುಲಿಗೆ ದಬ್ಬಾಳಿಕೆಯಂತಹ ಚಟುವಟಿಕೆಗಳು ಕಂಡು ಬಂದಲ್ಲಿ ತಕ್ಷಣ ಪೋಲೀಸ್ ಠಾಣೆಗೆ ದೂರು ನೀಡತಕ್ಕದ್ದು.
14. ಕಬ್ಬನ್ ಉದ್ಯಾನವನದ ಒಳಗೆ ಬರುವಂತಹ ಪ್ರವಾಸಿಗರು ತಿಂಡಿ ತಿನಿಸುಗಳನ್ನು ತಂದು ತಿಂದ ನಂತರ ತ್ಯಾಜ್ಯ ವಸ್ತುಗಳನ್ನು ಉದ್ಯಾನಗಳಲ್ಲಿ / ಹುಲ್ಲು ಹಾಸುಗಳ ಮೇಲೆ ಬಿಸಾಡದೆ ಕಸದ ತೊಟ್ಟಿಯಲ್ಲಿಯೇ ಹಾಕುವಂತೆ ಸೂಚಿಸುವುದು.
15. ಕಬ್ಬನ್ ಉದ್ಯಾನವನದ ಒಳಗೆ ರಾತ್ರಿ 8.00 ಗಂಟೆಯಿಂದ ಬೆಳಿಗ್ಗೆ 6.00 ಗಂಟೆಯವರೆಗೆ ಕರ್ತವ್ಯದಲ್ಲಿರುವ ಅಧಿಕಾರಿ / ನೌಕರರನ್ನು ಹೊರತುಪಡಿಸಿ ಸಾರ್ವಜನಿಕರನ್ನು ಹೊರಗೆ ಕಳುಹಿಸಬೇಕು. ಕಛೇರಿ ವೇಳೆ ಅಥವಾ ಕಛೇರಿ ವೇಳೆ ನಂತರದ ಸಮಯದಲ್ಲಿ ಅನಧಿಕೃತ ವ್ಯಕ್ತಿಗಳ ಚಲನವಲನಗಳನ್ನು ನಿರ್ಬಂಧಿಸಬೇಕು ಕಬ್ಬನ್ ಉದ್ಯಾನವನದ ಕಾಂಪೌಂಡ್ ದಾಟುವುದು ಅಥವಾ ಕಾಂಪೌಂಡ್ ಗೋಡೆಯಿಂದ ಗಿಡ, ಮರ, ಸೌದೆ ಇತ್ಯಾದಿಗಳನ್ನು ಸಾಗಿಸುವುದನ್ನು ನಿರ್ಬಂಧಿಸಬೇಕು.
16. ಕಬ್ಬನ್ ಉದ್ಯಾನವನದ ಒಳಗೆ ಆಕಸ್ಮಿಕವಾಗಿ ಯಾರಾದರೂ ಮರಣ ಹೊಂದಿದಾಗ ತಕ್ಷಣ ಪೋಲೀಸ್ ಠಾಣೆಗೆ ದೂರು ನೀಡಿ ಈ ಕಛೇರಿಗೆ ವರದಿ ಮಾಡಬೇಕು.
17. ಭದ್ರತೆಗಾಗಿ ನೇಮಿಸುವ ಭದ್ರತಾ ಸಿಬ್ಬಂದಿಯು ಕರ್ತವ್ಯದ ಮೇಲೆ ಇರುವಾಗ ಸಮವಸ್ತ್ರ, ಗುರುತಿನ ಬ್ಯಾಡ್ಜ್ ಧರಿಸಿರಬೇಕು. ಹಾಗೂ ಶಿಸ್ತು ಸಂಯಮದೊಂದಿಗೆ ಸಾರ್ವಜನಿಕರೊಡನೆ ಉತ್ತಮ ನಡೆ, ನುಡಿ ಇರುವಂತಹ ಸಿಬ್ಬಂದಿಯನ್ನು ಮಾತ್ರ ನೇಮಿಸಬೇಕು. ಸಿಬ್ಬಂದಿ ವರ್ಗದವರು ಕನ್ನಡ ಮತ್ತು ಆಂಗ್ಲ ಭಾಷೆಯನ್ನು ಚೆನ್ನಾಗಿ ಉಪಯೋಗಿಸುವ ಅರ್ಹತೆ ಇರಬೇಕು. ಯಾವುದೇ ಕಾರಣಕ್ಕೆ ಕರ್ತವ್ಯದ ಮೇಲೆ ಇರುವ ಸೆಕ್ಯೂರಿಟಿ ಸಿಬ್ಬಂದಿಯು ಧೂಮಪಾನ, ಮದ್ಯಪಾನ ಮಾಡಬಾರದು. ದಿನ 24 ಗಂಟೆಗಳ ಸಂರಕ್ಷಣೆಯನ್ನು 3 ಪಾಳಿಗಳಲ್ಲಿ ವ್ಯವಸ್ಥಿತವಾಗಿ ನಿರ್ವಹಿಸಬೇಕು. 18 ವಯಸ್ಸಿನ ಕೆಳಗಿಂತ ಅಥವಾ ವಯಸ್ಸಾದವರನ್ನು ಕೆಲಸಕ್ಕೆ ನೇಮಿಸಬಾರದು.
18. ಸಾರ್ವಜನಿಕ ರಜೆಯ ದಿನಗಳಂದು ಮತ್ತು ಪ್ರತಿ ವರ್ಷ ಎರಡು ಬಾರಿ ನಡೆಯುವ ಫಲಪುಷ್ಪ ಪ್ರದರ್ಶನದ ಅವಧಿಯಲ್ಲಿ ಅಲಂಕಾರಿಕ ಕುಂಡಗಳನ್ನು ಕಬ್ಬನ್ ಉದ್ಯಾನವನದಲ್ಲಿರುವ ಪ್ರತಿಮೆಗಳ ಸುತ್ತ ಜೋಡಿಸುವುದರಿಂದ ಇವುಗಳಿಗೆ ವಿಶೇಷ ಭದ್ರತೆ ನಿರ್ವಹಣೆಯನ್ನು ಮಾಡಬೇಕು.
19. ಕಬ್ಬನ್ ಉದ್ಯಾನವನದಲ್ಲಿ ಕಾರ್ಯ ನಿರ್ವಹಿಸುವ ಸಿಬ್ಬಂದಿಯ ಮೇಲೆ ದುಷ್ಕರ್ಮಿಗಳು ಮಾಡುವ ಹಲ್ಲೆಯಂತಹ ಚಟುವಟಿಕೆಗಳನ್ನು ನಿರ್ಬಂಧಿಸಬೇಕು.
20. ಕಬ್ಬನ್ ಉದ್ಯಾನವನದಲ್ಲಿ ಯಾವುದೇ ಕ್ರೀಡೆ, ಆಟಗಳು, ಸಂಗೀತೋತ್ಸವ ಶಿಬಿರಗಳು ಇತ್ಯಾದಿಗಳನ್ನು ನಿರ್ಬಂಧಿಸಬೇಕು. ಗುಲಾಬಿ ವನ, ಮತ್ತು ತಾವರೆಕೊಳದಲ್ಲಿನ ಹೂವುಗಳನ್ನು ಸಂರಕ್ಷಿಸಬೇಕು.

**ಷರತ್ತು ಹಾಗೂ ನಿಬಂಧನೆಗಳು**

1. ಟೆಂಡರ್ ಸಲ್ಲಿಸುವ ಸಮಯದಲ್ಲಿ ರೂ.1.00 ಲಕ್ಷ ಮೌಲ್ಯದ ಭದ್ರತಾ ಠೇವಣಿಯನ್ನು ಕಾರ್ಯದರ್ಶಿಗಳು, ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನ ಬೆಂಗಳೂರು, ರವರಿಗೆ ಪಾವತಿಯಾಗುವಂತೆ ಬ್ಯಾಂಕ್ ಡ್ರಾಫ್ಟ್ ತೆಗೆದು ಲಗತ್ತಿಸಿರಬೇಕು. ಯಶಸ್ವಿ ಟೆಂಡರ್‌ದಾರರ EMD ಯನ್ನು ಬಿಟ್ಟು ಉಳಿದ ಟೆಂಡರ್‌ದಾರರ ಠೇವಣಿಯನ್ನು ಟೆಂಡರ್‌ಗಳ ಪರಿಶೀಲನೆ ನಂತರ ಹಿಂತಿರುಗಿಸಲಾಗುವುದು. ಯಶಸ್ವಿ ಟೆಂಡರ್‌ದಾರರ ಠೇವಣಿಯನ್ನು ಗುತ್ತಿಗೆ ಅವಧಿಯನ್ನು ಯಶಸ್ವಿಯಾಗಿ ಪೂರೈಸಿದ ನಂತರ ಬ್ಯಾಂಕ್ ಗ್ಯಾರಂಟಿಯನ್ನು ಹಿಂದಕ್ಕೆ ಪಡೆಯಬಹುದಾಗಿದೆ.
2. ಟೆಂಡರ್ ಅರ್ಜಿಯ ಜೊತೆಗೆ ಸರ್ಕಾರ, ಸರ್ಕಾರದ ಅಂಗ ಸಂಸ್ಥೆಗಳಲ್ಲಿ ಅಥವಾ ಸಾರ್ವಜನಿಕ ಉದ್ಯಮಗಳಲ್ಲಿ ಕನಿಷ್ಠ ಹತ್ತರಿಂದ ಹದಿನೈದು ವರ್ಷಗಳ ಭದ್ರತಾ ಸೇವೆಯನ್ನು ಕನಿಷ್ಠ 50 ಮಂದಿ ಸೆಕ್ಯೂರಿಟಿ ಸಿಬ್ಬಂದಿಯೊಂದಿಗೆ ತೃಪ್ತಿಕರವಾಗಿ ಒದಗಿಸಿದ ದೃಢೀಕರಣ ಪತ್ರವನ್ನು ಟೆಂಡರ್‌ದಾರರು ಲಗತ್ತಿಸಿರಬೇಕು. ಟೆಂಡರ್‌ದಾರರು ಕರ್ನಾಟಕ ಕಾರ್ಮಿಕ ಕಾಯ್ದೆಯನ್ವಯ ಭದ್ರತಾ ಸಿಬ್ಬಂಧಿಗೆ ಕನಿಷ್ಠ ವೇತನವನ್ನು ಪಾವತಿ ಮಾಡಬೇಕು. ಎಲ್ಲಾ ಭದ್ರತಾ ಸಿಬ್ಬಂದಿಗೂ ಸಮವಸ್ತ್ರ ಹಾಗೂ ಅವರ ಹೆಸರು ಸೂಚಿಸುವ ಬ್ಯಾಡ್ಜ್‌ಗಳನ್ನು ಒದಗಿಸಬೇಕು. ಭದ್ರತಾ ಸಿಬ್ಬಂದಿಯು ಕನಿಷ್ಠ ಎಸ್.ಎಸ್.ಎಲ್.ಸಿ. ವಿದ್ಯಾರ್ಹತೆಯನ್ನು ಹೊಂದಿದ್ದು, ಕನ್ನಡ ಭಾಷೆಯನ್ನು ಮಾತನಾಡುವವರಾಗಿರಬೇಕು. ಇದಕ್ಕೆ ಸಂಬಂಧಪಟ್ಟ ಅಭ್ಯರ್ಥಿಯ ಪ್ರಮಾಣ ಪತ್ರಗಳನ್ನು ಕಛೇರಿಗೆ ಸಲ್ಲಿಸಬೇಕು ಮತ್ತು ಕನಿಷ್ಠ 18 ಗರಿಷ್ಠ 40 ವರ್ಷಗಳ ವಯೋಮಿತಿಯೊಳಗಿನ ದೃಢಕಾಯವಾದ ಸಿಬ್ಬಂದಿಯನ್ನು ಮಾತ್ರ ನೇಮಿಸಬೇಕು. ಕನಿಷ್ಠ ಒಟ್ಟು 60 ಸಿಬ್ಬಂದಿಯನ್ನು ನೇಮಿಸಿ ಪ್ರತಿ ಪಾಳಿಯಲ್ಲಿ ಕನಿಷ್ಠ 20 ಸಿಬ್ಬಂಧಿ ಇರುವಂತೆ ನೋಡಿಕೊಳ್ಳಬೇಕು. ಅವರುಗಳ ಸಂಪೂರ್ಣ ವೈಯಕ್ತಿಕ ಮಾಹಿತಿಯನ್ನು ಭಾವಚಿತ್ರ ಸಮೇತವಾಗಿ ಸೆಕ್ಯೂರಿಟಿ ಸೇವೆಯನ್ನು ವಹಿಸಿಕೊಳ್ಳುವ ಮೊದಲು ಈ ಕಛೇರಿಗೆ ಸಲ್ಲಿಸಬೇಕು. ಒಂದು ವೇಳೆ, ಸಿಬ್ಬಂದಿಯನ್ನು ಬದಲಾಯಿಸಿದಲ್ಲಿ ಬದಲಾದ ಸಿಬ್ಬಂದಿಯ ವೈಯಕ್ತಿಕ ಮಾಹಿತಿಯನ್ನು ತಕ್ಷಣ ಕಛೇರಿಗೆ ಸಲ್ಲಿಸಬೇಕು.
3. ಟೆಂಡರ್‌ದಾರರು ESI ಹಾಗೂ PF ಪ್ರಮಾಣ ಪತ್ರಗಳನ್ನು ಹೊಂದಿರಬೇಕು.
4. ಏಜೆನ್ಸಿಯು ಕಾರ್ಮಿಕ ಇಲಾಖೆಯಿಂದ ಪಡೆದ ಅಧಿಕೃತ ನೊಂದಣಿ ಪತ್ರ ಸಲ್ಲಿಸಿರಬೇಕು.
5. ವೃತ್ತಿ ತೆರಿಗೆ ಪಾವತಿಸಲು ನೊಂದಣಿಯಾಗಿರುವ ಬಗ್ಗೆ ಪ್ರಮಾಣ ಪತ್ರ ಸಲ್ಲಿಸಬೇಕು.
6. ಸರ್ವೀಸ್ ತೆರಿಗೆ ಪಾವತಿಸಲು ನೊಂದಣಿಯಾಗಿರುವ ಬಗ್ಗೆ ಪ್ರಮಾಣ ಪತ್ರ ಸಲ್ಲಿಸಬೇಕು ಮತ್ತು ಕಳೆದ ನಾಲ್ಕು ವರ್ಷಗಳಲ್ಲಿ ಸರ್ವೀಸ್ ತೆರಿಗೆ ಪಾವತಿಸಿದ ಬಗ್ಗೆ ದಾಖಲೆ ಮತ್ತು ಸರ್ವೀಸ್ ತೆರಿಗೆ ರಿಟರ್ನ್ಸ್‌ಗಳನ್ನು ಸಲ್ಲಿಸಿರುವ ಬಗ್ಗೆ ದಾಖಲೆಗಳನ್ನು ಲಗತ್ತಿಸಿರಬೇಕು.

7. ಟೆಂಡರ್‌ದಾರರು ಕಳೆದ 3 ವರ್ಷಗಳಿಂದ ಆದಾಯ ತೆರಿಗೆ ಪಾವತಿಸಿರುವ ಬಗ್ಗೆ ದಾಖಲೆಗಳನ್ನು ಲಗತ್ತಿಸಿರಬೇಕು.
8. ಟೆಂಡರ್‌ದಾರರು ಮಿಲಿಟರಿ/ ಪ್ಯಾರಾ ಮಿಲಿಟರಿ /ಪೋಲೀಸ್ ಇಲಾಖೆಯಲ್ಲಿ ಕಾರ್ಯನಿರ್ವಹಿಸಿದವರಿಗೆ ಆದ್ಯತೆ ನೀಡಲಾಗುವುದು ಈ ಬಗ್ಗೆ ಅಧಿಕೃತ ಪ್ರಮಾಣ ಪತ್ರಗಳನ್ನು ಲಗತ್ತಿಸಬೇಕು.
9. ಲಗತ್ತಿಸಿರುವ ಎಲ್ಲಾ ದಾಖಲೆಗಳನ್ನು ನೋಟರಿ ಯವರಿಂದ ದೃಢೀಕರಿಸಿರಬೇಕು.
10. ಭದ್ರತಾ ಏಜೆನ್ಸಿಯು ಒಂದು ಪ್ರತ್ಯೇಕ ಸುಸುಜ್ಜಿತ ಗಸ್ತು ಭದ್ರತಾ ವಾಹನವನ್ನು ದಿನದ 24 ಗಂಟೆಗಳ ಕಾಲ ಕಬ್ಬನ್ ಪಾರ್ಕ್‌ನಲ್ಲಿ ನಿಯೋಜಿಸಲು ಬದ್ಧರಾಗಿರಬೇಕು.
11. ಭದ್ರತಾ ಸೇವೆಯನ್ನು ಸೂಚಿಸಿರುವ ಷರತ್ತು ಹಾಗೂ ನಿಬಂಧನೆಗಳಂತೆ ನಿರ್ವಹಿಸಲು ವಿಫಲರಾದಲ್ಲಿ ಅಥವಾ ನಿರ್ಧರಿತ ಅವಧಿ, ಮಧ್ಯದಲ್ಲಿಯೇ ಸ್ಥಗಿತಗೊಳಿಸಿದಲ್ಲಿ ಟೆಂಡರ್ ಅನುಮೋದಿಸಿ, ಭದ್ರತಾ ಸೇವೆಯನ್ನು ಒದಗಿಸಲು ಸೂಚಿಸಿದ ಒಂದು ತಿಂಗಳೊಳಗೆ ಭದ್ರತಾ ಸಿಬ್ಬಂದಿಯನ್ನು ನೇಮಿಸಲು ವಿಫಲರಾದಲ್ಲಿ ಟೆಂಡರ್ ಸಮಯದಲ್ಲಿ ನೀಡಿದ ರೂ.1.00 ಲಕ್ಷಗಳ ಬ್ಯಾಂಕ್ ಗ್ಯಾರಂಟಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಕಾನೂನಿನಂತೆ ಕ್ರಮ ಜರುಗಿಸಲಾಗುವುದು. ಜೊತೆಗೆ ಕಾರ್ಯನಿರ್ವಹಣೆ ಅವಧಿಯಲ್ಲಿ ನಿಗದಿತ ಷರತ್ತು ಹಾಗೂ ನಿಬಂಧನೆಗಳನ್ವಯ ಲೋಪದೋಷ ಉಂಟಾದಲ್ಲಿ ಈ ಕೆಳಗಿನಂತೆ ದಂಡವನ್ನು ವಿಧಿಸಿ ಪ್ರತಿ ಮಾಹೆಯಲ್ಲಿ ಗುತ್ತಿಗೆ ಹಣವನ್ನು ಪಾವತಿ ಮಾಡುವ ಸಮಯದಲ್ಲಿ ಕಡಿತಗೊಳಿಸಲಾಗುವುದು.
    1. ಸೆಕ್ಯೂರಿಟಿ ಸೇವೆಯಲ್ಲಿ ಯಾವುದೇ ಲೋಪ ದೋಷಗಳು ಕಂಡುಬಂದಲ್ಲಿ ಪ್ರಥಮ ಬಾರಿಗೆ ಗುತ್ತಿಗೆದಾರರ ತಿಂಗಳ ಬಿಲ್ಲಿನಲ್ಲಿ ಶೇ.3 ರಷ್ಟು ದಂಡವನ್ನು ವಿಧಿಸಲಾಗುವುದು.
    2. ಸೆಕ್ಯೂರಿಟಿ ಸೇವೆಯಲ್ಲಿ ಎರಡನೇ ಬಾರಿಗೆ ಯಾವುದೇ ಲೋಪ ದೋಷಗಳು ಕಂಡು ಬಂದಲ್ಲಿ ಗುತ್ತಿಗೆದಾರರ ತಿಂಗಳ ಬಿಲ್ಲಿನಲ್ಲಿ ಶೇ.5 ರಷ್ಟು ದಂಡವನ್ನು ವಿಧಿಸಲಾಗುವುದು.
    3. ಸೆಕ್ಯೂರಿಟಿ ಸೇವೆಯಲ್ಲಿ 2ನೇ ಬಾರಿಗೆ ಯಾವುದೇ ಲೋಪ ದೋಷಗಳು ಕಂಡುಬಂದಲ್ಲಿ ಗುತ್ತಿಗೆದಾರರ ತಿಂಗಳ ಬಿಲ್ಲಿನಲ್ಲಿ ಶೇ.10 ರಷ್ಟು ದಂಡವನ್ನು ವಿಧಿಸಲಾಗುವುದು.
    4. ಮೂರು ಅಥವಾ ಹೆಚ್ಚು ಬಾರಿ ಇದೇ ರೀತಿ ಲೋಪ ದೋಷಗಳು ಕಂಡುಬಂದಲ್ಲಿ ಅಂತಹ ಸೆಕ್ಯೂರಿಟಿ ಸಂಸ್ಥೆಯ ಗುತ್ತಿಗೆಯ ಅವಧಿಯನ್ನು ರದ್ದುಪಡಿಸಿ, ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು.
12. ಭರ್ತಿ ಮಾಡಿದ ಟೆಂಡರ್‌ಗಳನ್ನು ಪರಿಗಣಿಸುವ ಮೊದಲು ನೋಂದಾಯಿತ ಸೆಕ್ಯೂರಿಟಿ ಸಂಸ್ಥೆಯವರು ಹೊಂದಿರುವ ಕಛೇರಿ, ಅವರು ಹೊಂದಿರುವ ಭದ್ರತಾ ಸಿಬ್ಬಂದಿ ಇತ್ಯಾದಿ ದಾಖಲೆಗಳನ್ನು ಸ್ಥಳಕ್ಕೆ ಬಂದು ಪರಿಶೀಲಿಸಲಾಗುವುದು. ಒಂದು ವೇಳೆ ಅತೀ ಕನಿಷ್ಠ ಮೊತ್ತ ನಮೂದಿಸಿ ಸಲ್ಲಿಸಿದ ಟೆಂಡರ್‌ದಾರರು ಅಗತ್ಯ ಸಿಬ್ಬಂದಿ ಇತ್ಯಾದಿ ತಾಂತಿಕ ಹಾಗೂ ಆಡಳಿತಾತ್ಮಕ ಮೂಲ ಸೌಲಭ್ಯಗಳು ಇಲ್ಲದೇ ಹೋದಲ್ಲಿ ಅಂತಹ ಗುತ್ತಿಗೆದಾರರ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು. ಈ ಎಲ್ಲಾ ಸೌಲಭ್ಯಗಳು ಇದ್ದಲ್ಲಿ ಮಾತ್ರ ಅಂತಹವರ ಟೆಂಡರ್‌ಗಳನ್ನು ಅನುಮೋದನೆಗಾಗಿ ಪರಿಶೀಲಿಸಲಾಗುವುದು.
13. ಸೆಕ್ಯೂರಿಟಿ ಸಿಬ್ಬಂದಿಯ ಪೂರ್ಣ ಜವಾಬ್ದಾರಿ ಟೆಂಡರ್‌ದಾರರದ್ದಾಗಿರುತ್ತದೆ. ಭದ್ರತಾ ಸಿಬ್ಬಂದಿಗೆ ಯಾವುದೇ ರೀತಿಯ ತೊಂದರೆಯಾಗಲೀ ಅದಕ್ಕೆ ಇಲಾಖೆ ಜವಾಬ್ದಾರಿಯಾಗಿರುವುದಿಲ್ಲ.
14. ರಾತ್ರಿ ಪಾಳಿಯಲ್ಲಿ ಕೆಲಸ ನಿರ್ವಹಿಸುವ ಭದ್ರತಾ ಸಿಬ್ಬಂದಿಗೆ ಟಾರ್ಚ್ (ಬ್ಯಾಟರಿ) ಮತ್ತಿತರೆ ಅಗತ್ಯ ಸಾಮಾನುಗಳನ್ನು ಒದಗಿಸುವುದು ಟೆಂಡರ್‌ದಾರರದ್ದಾಗಿರುತ್ತದೆ.
15. ಟೆಂಡರ್‌ಗಳನ್ನು ಅನುಮೋದಿಸುವ ಅಥವಾ ಕಾರಣ ನೀಡದೇ ತಿರಸ್ಕರಿಸುವ ಹಕ್ಕನ್ನು ಮತ್ತು ಭದ್ರತಾ ಸೇವೆಯನ್ನು ಒದಗಿಸುವ ಅವಧಿಯನ್ನು ಒಂದು ವರ್ಷದೊಳಗೆ ಮೊಟಕುಗೊಳಿಸುವ /ರದ್ದುಪಡಿಸುವ ಅಥವಾ ಸೆಕ್ಯೂರಿಟಿ ಸೇವೆ ತೃಪ್ತಿಕರವಾಗಿದ್ದಲ್ಲಿ ಮತ್ತೊಂದು ವರ್ಷ ಗುತ್ತಿಗೆ ಅವಧಿಯನ್ನು ಮುಂದುವರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು ಹಾಗೂ ಸದಸ್ಯ ಕಾರ್ಯದರ್ಶಿಗಳು, ಸುವರ್ಣ ಕರ್ನಾಟಕ ಗಾರ್ಡನ್ ಟ್ರಸ್ಟ್ ರವರಲ್ಲಿ ಕಾಯ್ದಿರಿಸಲಾಗಿದೆ.
16. ಯಶ್ವಸಿ ಟೆಂಡರ್‌ದಾರರು ಭದ್ರತಾ ಸೇವೆಯನ್ನು ವಹಿಸಿಕೊಳ್ಳುವ ಮೊದಲು ಈ ಮೇಲೆ ಸೂಚಿಸಿರುವ ನಿರ್ವಹಿಸಬೇಕಾದ ಕೆಲಸಗಳನ್ನು ನಿರ್ವಹಿಸುವುದಾಗಿ ಮತ್ತು ಷರತ್ತು ಮತ್ತು ನಿಬಂಧನೆಗಳಿಗೆ ಬದ್ಧನಾಗಿರುತ್ತೇನೆಯೆಂದು ರೂ.200 ಮೌಲ್ಯದ ಛಾಪಾ ಕಾಗದದ ಮೇಲೆ ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಪಾರ್ಕ್ ರವರೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು.
17. ತಾವು ನಮೂದಿಸುವ ಕನಿಷ್ಟ ಸೇವಾ ವೆಚ್ಚವು ಸಂಬಂಧಿಸಿದ ಎಲ್ಲಾ ರೀತಿಯ ತೆರಿಗೆಗಳನ್ನು ಒಳಗೊಂಡಿರಬೇಕು ಹಾಗೂ ತಮ್ಮ ಕನಿಷ್ಠ ದರವು ಕನಿಷ್ಠ ಕಾರ್ಮಿಕ ಕಾಯ್ದೆಗೊಳಪಟ್ಟಿರಬೇಕು ಹಾಗೂ ಕನಿಷ್ಠ ಕಾರ್ಮಿಕ ಕಾಯ್ದೆಯ ಎಲ್ಲಾ ನಿಬಂಧನೆಗಳನ್ನು ಪೂರೈಸಬೇಕು.
18. ಷರತ್ತು ಮತ್ತು ನಿಬಂಧನೆಗಳಲ್ಲಿ ಕ್ರಮ ಸಂಖ್ಯೆ 1 ರಿಂದ 17 ರ ವರೆಗೆ ಅನ್ವಯವಾಗುವ ಎಲ್ಲಾ ತಾಂತ್ರಿಕ ವಿವರಗಳ ದಾಖಲೆಗಳನ್ನು ಪತ್ಯೇಕ ಲಕೋಟೆಯಲ್ಲಿ ಸಲ್ಲಿಸಬೇಕು ಹಾಗೂ ಆರ್ಥಿಕ ಬಿಡ್ಡನ್ನು ಪ್ರತ್ಯೇಕವಾಗಿ ಸಲ್ಲಿಸಬೇಕು.
19. ತಾಂತಿಕ ದಾಖಲೆಗಳು ಇಲ್ಲದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಹೆಚ್ಚಿನ ವಿಷಯಗಳಿಗೆ ಈ ಕೆಳ ಸಹಿದಾರರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ಪಿ.ಆರ್. 340 ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು.